FAX : 080-22867522
TEL : 080-22862583

ಕರ್ನಾಟಕ ಸರ್ಕಾರ
GOVERNMENT OF KARNATAKA

ಅಡ್ವೊಕೇಟ್ ಜನರಲ್‌ರವರ ಕಛೇರಿ
ಉಚ್ಚ ನ್ಯಾಯಾಲಯದ ಕಟ್ಟಡ
ಬೆಂಗಳೂರು-೫೬೦ ೦೦೧
OFFICE OF THE ADVOCATE GENERAL
HIGH COURT BUILDING
BENGALURU-560 001

ಕ್ರಮಾಂಕ
NO.

ಗೆ,
TO,

ದಿನಾಂಕ DATED..............................

The Head of the Legal Cell,
Department of Home,
M.S, Building,
Bengaluru.

**29.02.2020**

SUB: OPINION IN W.P.No.25835/2018 (GM-RES) on the file of the High Court of Karnataka at Bengaluru - Mr. Haresh Kumar, Bengaluru /vs/ The State of Karnataka and another.

******

I have perused the final order passed by the Hon'ble Court dated 14.01.2020.

In the above Writ Petition, the Petitioner has sought for quashing the FIR No.42/2018 dated 21.05.2018 on the file of IV Additional City Metropolitan Magistrate Court, Bengaluru City, based on the complaint filed by the Respondent No.1 Police against the Petitioner under Section 192 A Karnataka Land Revenue Act, Sections 217, 409 and 420 of Indian Penal Code vide Annexure-B and etc.,

The Hon'ble Court was pleased to pass an order allowing the Writ Petition and quashing Proceedings initiated in F.I.R.No.42/2018 pending on the file of 4th Additional Chief Metropolitan Magistrate, Bengaluru for the offence

punishable under Sections 192A of the Karnataka Land Revenue Act, and Sections 217, 409 and 420 of Indian Penal Code reserving liberty to the Respondent-State to file afresh case after following the procedure laid down in the judgment of Smt. Lalitha Sastry .VS. The State of Karnataka reported in ILR 2008 Karnataka 4520, and thereafter take steps in accordance with law.

In this Petition the major bone of contention raised by the Petitioner is that despite of providing supporting documents in support of their case and their title over the Land and regarding the deviation of Nala, which is 17 gunats of 'A' Kharab Land, the Respondents have initiated the Criminal case without following the procedure laid down in the case of Smt Lalitha Sastry stated supra. The proceedings were initiated is bad in law. After going through the records the Hon'ble High Court was rightly of the opinion that the procedure laid down in the said case has not been followed by the Respondent -Police.

Hence, the Hon'ble High Court was pleased to quash the proceedings in F.I.R.No.42/2008. However reserved liberty of

the State to initiate the proceedings by following the said judgment. Hence, the interest of State is also protected.

I am, of the considered opinion that this is not a fit case to file an appeal.

Certified copy of the order is enclosed herewith.

Yours faithfully,

(H.R. SHOWRI)
HIGH COURT GOVT PLEADER

ENCL: C.C
COPY TO:

1. The State of Karnataka, Represented by Bengaluru Metropolitan Task Force, Represented by its Sub-Inspector of Police, BBMP Head Office, Corporation Building, N.R. Square, Bengaluru-560 002.

2. Additional Director General of Police, Bengaluru Metropolitan Task Force, BBMP Head Office, Corporation Building, N.R. Square, Bengaluru-560 002.

304/GTA/20-21

UP/comp YKP OPINION DOC.,

Chargesheet

# FIRST INFORMATION REPORT

(Under Section 154 Crpc)

[ Before the Honorable 4th ACMM Court, Bengaluru City ]

1. Crime No: **43/2018** Police Station: Bengaluru Metropolitan Task Force

FIR Date: 24-05-2018 TIME: 18-00 hrs. District : Bengaluru City

Type : Computer Typed State : Karnataka

2. Act and Section: **33 (A), 72 BDA Act and 217, 409, 420 IPC**

3. (a) Occurrence of offence: From: Prior to 29-11-2017

Time from: 00:00:00 Hrs. Day:

(b) Information received at P.S: Date: 24-05-2018

(c) Type of Information: Written (Computer typed)

4. Place of occurrence: **CA Site No. 820A, 820B, 820C, 820D, 820E, 820F Of Survey No. 18/9, ITI Layout, Mangammana Palya, Bengaluru city.**

(a) Direction and Distance from Police Station: 15 **Kms towards South**

(b) In Case outside limits of this police Station then Name of P.S: Dist.

5. Complainant/Informant.

(a) Name: **Sri. Amaresh Gowda.A** (b) Father Name:

(c) Age : (d) Nationality: **Indian**

(e) Passport No: (f) Date of Issue:

(g) Place of Issue: (h) Occupation: **Police Sub-Inspector**

Address: **B.M.T.F Police Station, N.R Square, BBMP Head Office, Bengaluru.**

6. Details of Known/ Suspected/Unknown Accused with Full Particulars:

**1. President, ITI Employees Housing Co-operative Society Ltd.**
**2. Executive Engineer, East Sub-Division, BDA, Bengaluru.**
**3. Mrs. Sirajunnisa**
**4. Mrs.Vimala. and Other Sites owners and Officals**

7. Reasons for Delay in reporting by the Complainant/Informant:

8. Particulars of Properties stolen/ involved:

9. Total Value of Properties Stolen/involved:

10. Inquest reports/U.D Case no if any:

11. Brief facts: **As attached**

(1) Detected (Name of I.O): Shivakumar.V Rank: Police Sub-Inspector
(2) Refused Investigation due to
(3) On Point of jurisdiction transferred to PS District:
(a) Read over to the complainant informant, admitted to be correctly recorded, and a copy given to the complainant/Informant free Cost.? Yes
(b) If the Police Officer does not proceed to the spot for investigation of if he declines to investigate/S 157 Cr.P.C provision (a) or (b) the reason there of should be mentioned.

12. Action Taken: **Investigation.**

13. Signature/Thumb impression of complainant.

14. Date and time of dispatch to the court : 24-05-2018 at 18-15 hrs.

15. Name of the PC/HC who carried the FIR to the Court:- Chandrashekar CPC

Signature of the I.O

Name of the I.O. (Shivakumar.V)
Rank: Police Sub-Inspector
Police Station: BMTF

Police Sub-Inspector
B.M.T.F. Police Station,
Bengaluru.

**Copy To**

1. Additional Director Genaral Of Police, Bengaluru.
2. Superintendent of Police BMTF, Bengaluru City.
3. Dysp, BMTF, Bengaluru City.
4. Complaint Copy/Officer Copy.

ಎಡಿಜಿಪಿ/ಬಿಎಂಟಿಎಫ್/ಪೆಟಿಷನ್/194/2017

ಪೊಲೀಸ್ ಸಬ್ ಇನ್ಸ್‌ಪೆಕ್ಟರ್
ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ
ಬಿ.ಬಿ.ಎಂ.ಪಿ ಕೇಂದ್ರ ಕಛೇರಿ
ದಿನಾಂಕ: 24-05-2018

ರವರಿಗೆ,

ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು,
ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ,
ಬೆಂಗಳೂರು.

SHO
1) For FIR
2) PSI Shiv Kr for n/a & I.O
24/5

ಮಾನ್ಯರೇ,

ವಿಷಯ: ಶ್ರೀ ಎ. ಕೋದಂಡರಾಮ, ಬಿನ್ ಲೇಟ್ ಅಣ್ಣಪ್ಪ ಎಂಬುವರು ಸಲ್ಲಿಸಿದ್ದ ದೂರಿನ ವಿಚಾರಣಾ ವರದಿಯನ್ನು ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆಯಲ್ಲಿ ಮುಂದಿನ ಕಾನೂನು ಕ್ರಮಕ್ಕಾಗಿ ಸಲ್ಲಿಸುತ್ತಿರುವ ಬಗ್ಗೆ .

ಉಲ್ಲೇಖ: ನಂ: ಎಡಿಜಿಪಿ/ಬಿಎಂಟಿಎಫ್/ಪೆಟಿಷನ್/194/2017, ದಿನಾಂಕ 29-11-2017.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ 29-11-2017 ರಂದು ಶ್ರೀ ಎ. ಕೋದಂಡರಾಮ, ಬಿನ್ ಲೇಟ್ ಅಣ್ಣಪ್ಪ, ನಂ: 24, 1ನೇ ಮುಖ್ಯರಸ್ತೆ, ಹಳೆ ಗುರಪ್ಪನಪಾಳ್ಯ, ಧರ್ಮಾರಾಮ್ ಕಾಲೇಜು ಅಂಚೆ, ಬಿ.ಟಿ.ಎಂ. ಬಡಾವಣೆ, 1ನೇ ಹಂತ, ಬೆಂಗಳೂರು-560029 ರವರು ಬಿ.ಎಂ.ಟಿ.ಎಫ್‌ಗೆ ಹಾಜರಾಗಿ ನೀಡಿದ ದೂರಿನ ಅಂಶವೇನೆಂದರೆ: ಬೆಂಗಳೂರು ನಗರ ಮಂಗಮ್ಮನಪಾಳ್ಯ ವಾರ್ಡ್ ವ್ಯಾಪ್ತಿಗೆ ಸೇರಿದ ಸ.ನಂ: 18/9 ರಲ್ಲಿನ ಐ.ಟಿ.ಐ ಲೇಔಟಿನಲ್ಲಿ ಉದ್ಯಾನವನಕ್ಕೆ ಮೀಸಲಿಟ್ಟಿರುವ ಜಾಗದಲ್ಲಿ ಅಕ್ರಮವಾಗಿ ನಿವೇಶನ ಸಂಖ್ಯೆ: 820ಎ, 820ಬಿ, 820ಸಿ, 820ಡಿ, 820ಇ, ಮತ್ತು 820ಎಫ್ ಎಂದು ಆರು ನಿವೇಶನಗಳನ್ನು ರಚಿಸಿದ್ದು, ಸದರಿ ನಿವೇಶನಗಳಲ್ಲಿ ಕೆಲವರು ಅನಧಿಕೃತವಾಗಿ ಕಟ್ಟಡಗಳನ್ನು ನಿರ್ಮಿಸಿಕೊಂಡಿದ್ದು, ಒಂದು ನಿವೇಶನದಲ್ಲಿ ಕಟ್ಟಡ ಕಾಮಗಾರಿ ಕೆಲಸವನ್ನು ಪ್ರಾರಂಭಿಸಲಾಗಿದೆ. ಆದ್ದರಿಂದ ಅವುಗಳನ್ನು ತೆರವುಗೊಳಿಸಿ ಸೂಕ್ತ ಕ್ರಮ ಜರುಗಿಸಬೇಕೆಂದು ದೂರು ಸಲ್ಲಿಸಿದ್ದು, ಉಲ್ಲೇಖದಂತೆ ದಾಖಲಾಗಿರುತ್ತದೆ. ಮಾನ್ಯ ಅಪರ ಪೊಲೀಸ್ ಮಹಾನಿರ್ದೇಶಕರು, ಬಿ.ಎಂ.ಟಿ.ಎಫ್ ರವರು ಸದರಿ ದೂರು ಅರ್ಜಿಯ ವಿಚಾರಣೆಗಾಗಿ ನನ್ನನ್ನು ನೇಮಿಸಿರುತ್ತಾರೆ.

ಅದರಂತೆ ದಿನಾಂಕ 30-11-2017 ರಂದು ಕಾರ್ಯಪಾಲಕ ಅಭಿಯಂತರರು (ಪೂರ್ವ), ಹೆಚ್.ಎಸ್.ಆರ್ ಬಡಾವಣೆ, ಬಿ.ಡಿ.ಎ, ಬೆಂಗಳೂರುರವರಿಗೆ ಸದರಿ ಸಿ.ಎ ಜಾಗದ ಒತ್ತುವರಿ ಬಗ್ಗೆ ಮಾಹಿತಿಯಿದ್ದರೆ ಕೈಗೊಂಡಿರುವ ಕ್ರಮದ ಬಗ್ಗೆ ವರದಿ ಮತ್ತು ದಾಖಲಾತಿಗಳೊಂದಿಗೆ ದಿನಾಂಕ 05-12-2017 ರಂದು ವಿಚಾರಣೆಗೆ ಹಾಜರಾಗುವಂತೆ ಸೂಚಿಸಿ ನೋಟಿಸ್ ಜಾರಿ ಮಾಡಿರುತ್ತೇನೆ.

ಸದರಿಯವರಿಂದ ಯಾವುದೇ ಪ್ರತಿಕ್ರಿಯೆ ಬಾರದ್ದರಿಂದ ದಿನಾಂಕ 12-01-2018 ಮತ್ತು 24-01-2018 ರಂದು ಕಾರ್ಯಪಾಲಕ ಅಭಿಯಂತರರು (ಪೂರ್ವ), ಹೆಚ್.ಎಸ್.ಆರ್ ಬಡಾವಣೆ, ಬಿ.ಡಿ.ಎ, ಬೆಂಗಳೂರುರವರಿಗೆ ಸದರಿ ಸಿ.ಎ ಜಾಗದ ಒತ್ತುವರಿ ಬಗ್ಗೆ ಮಾಹಿತಿಯಿದ್ದರೆ ಕೈಗೊಂಡಿರುವ ಕ್ರಮದ ಬಗ್ಗೆ ವರದಿ ಮತ್ತು ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ 24-01-2018 ರಂದು ಜಂಟಿ ನಿರ್ದೇಶಕರು, ನಗರ ಯೋಜನಾ ವಿಭಾಗ, ಬಿ.ಡಿ.ಎ ರವರಿಗೆ ಮಂಗಮ್ಮನ ಪಾಳ್ಯ ಐ.ಟಿ.ಐ ಬಡಾವಣೆಗೆ ಸಂಬಂಧ ಪಟ್ಟಂತೆ ದೃಢೀಕೃತ ಬಡಾವಣಾ ನಕ್ಷೆಯನ್ನು ಒದಗಿಸಲು ಕೋರಿ ಪತ್ರ ವ್ಯವಹಾರ ನಡೆಸಿರುತ್ತೇನೆ.

ದಿನಾಂಕ 17-02-2018 ರಂದು ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.3, ಪೂರ್ವ ಉಪವಿಭಾಗ, ದಿನಾಂಕ 17-02-2018 ರಂದು ಸಹಾಯಕ ಕಾರ್ಯಪಾಲಕ ಅಭಿಯಂತರರು ತಮ್ಮ ಕಛೇರಿ ಪತ್ರ ಸಂಖ್ಯೆ: ಬೆಂಅಪ್ರಾ/ಸ.ಕಾ.ಇಂ/ನಂ.3(ಪೂ)ಉ.ವಿ/1017/17-18

ಹೆಚ್.ಎಸ್.ಆರ್ ಬಡಾವಣೆ, ಬೆಂಗಳೂರು ರವರು ತಮ್ಮ ಕಛೇರಿ ಪತ್ರ ಸಂಖ್ಯೆ: ಬೆಂಅಪ್ರಾ/ಸ.ಕಾ.ಇಂ/ನಂ.3(ಪೂ)ಉ.ವಿ/1017/ ದಿನಾಂಕ 05-02-2018 ರಂದು ಕಾರ್ಯಪಾಲಕ ಅಭಿಯಂತರರ ರಂತೆ ವರದಿಯನ್ನು ನೀಡಿದ್ದು, ಸದರಿ ವರದಿಯಲ್ಲಿ ದಿನಾಂಕ 05-02-2018 ರಂದು ಕಾರ್ಯಪಾಲಕ ಅಭಿಯಂತರರ ಸೂಚನೆಯಂತೆ ಸ್ಥಳ ಪರಿಶೀಲನೆ ಮಾಡಲಾಗಿ, ಸದರಿ ಜಾಗದಲ್ಲಿ ಬಡಾವಣೆಯನ್ನು ನಿರ್ಮಾಣ ಮಾಡಿದ್ದು, ನಿವೇಶನ ಸಂಖ್ಯೆ 820ಎ, 820ಬಿ, 820ಸಿ, 820ಡಿ, 820ಇ, ಮತ್ತು 820ಎಫ್ ಗಳಲ್ಲಿ ಕಟ್ಟಡಗಳನ್ನು ನಿರ್ಮಿಸಿರುವುದು ಕಂಡು ಬಂದಿರುತ್ತದೆ. ಮುಂದುವರೆದು ಪ್ರಾಧಿಕಾರದ ಅನುಮೋದಿತ ಬಡಾವಣೆ ನಕ್ಷೆಯಲ್ಲಿ ಸದರಿ ಜಾಗದಲ್ಲಿ ಪಾರ್ಕ್‌ಗಾಗಿ ಜಾಗವನ್ನು ಮೀಸಲಿರಿಸಿದ್ದು, ಐ.ಟಿ.ಐ ಎಂಪ್ಲಾಯೀಸ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್‌ರವರು ಸದರಿ ಜಾಗದಲ್ಲಿ ಪಾರ್ಕನ್ನು ನಿರ್ಮಾಣ ಮಾಡಿರುವುದಿಲ್ಲ ಹಾಗೂ ನಮ್ಮ ಕಛೇರಿಯಲ್ಲಿದ್ದ ಪರಿತ್ಯಾಜನ ಪತ್ರದ ಪ್ರತಿಯನ್ನು ಮತ್ತು ನಕ್ಷೆಯನ್ನು ಲಗತ್ತಿಸಿದ್ದು, ಪರಿತ್ಯಾಜನ ಪತ್ರದಂತೆ ಸದರಿ ಪಾರ್ಕ್ ಜಾಗವನ್ನು ಈ ವಿಭಾಗಕ್ಕೆ ಹಸ್ತಾಂತರಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಮತ್ತು ಜಂಟಿ ನಿರ್ದೇಶಕರು, ನಗರ ಯೋಜನಾ ವಿಭಾಗ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರರವರು ದೃಢೀಕೃತ ಬಡಾವಣೆಯ ನಕ್ಷೆಯ ಪ್ರತಿಯನ್ನು ಟಪಾಲು ಮುಖಾಂತರ ಕಳುಹಿಸಿಕೊಟ್ಟಿದ್ದು, ಅದನ್ನು ಕಡತದಲ್ಲಿ ಅಳವಡಿಸಿಕೊಂಡಿರುತ್ತೇನೆ.

ದಿನಾಂಕ 20-02-2018 ರಂದು ವಿವಾದಿತ ಪಾರ್ಕ್ ಜಾಗದಲ್ಲಿರುವ ನಿವೇಶನ ಸಂಖ್ಯೆ 820ಎ ರಿಂದ 820ಎಫ್ ವರೆಗಿನ ಒಟ್ಟು ಆರು ನಿವೇಶನಗಳ ಮಾಲೀಕರಿಗೆ ನಿವೇಶನಗಳಿಗೆ ಸಂಬಂಧಪಟ್ಟಂತೆ ಕ್ರಯಪತ್ರ, ಖಾತೆ, ಬಿ.ಬಿ.ಎಂ.ಪಿ ಯಿಂದ ಮನೆ ನಿರ್ಮಿಸಲು ಪಡೆದುಕೊಂಡಿರುವ ನಕ್ಷೆ ಮಂಜೂರಾತಿ ದಾಖಲಾತಿಗಳೊಂದಿಗೆ ದಿನಾಂಕ 22-02-2018 ರಂದು ಹಾಜರಾಗಲು ನೋಟಿಸ್ ಜಾರಿ ಮಾಡಲು ಹೆಚ್.ಸಿ ಶಿವಶಂಕರ್‌ರವರನ್ನು ನೇಮಿಸಿದ್ದು, ಸದರಿಯವರು ನೋಟಿಸ್ ಜಾರಿ ಮಾಡಲು ಹೋದಾಗ ಒಂದು ನಿವೇಶನದ ಮಾಲೀಕರು ಮಾತ್ರ ಹಾಜರಿದ್ದು, ಸದರಿಯವರು ನೋಟಿಸನ್ನು ಸ್ವೀಕರಿಸಿ ಎಲ್ಲಾರಿಗೂ ತಿಳಿಸುವುದಾಗಿ ಹೇಳಿದ್ದಾಗಿ ಠಾಣೆಗೆ ಬಂದು ವರದಿ ಮಾಡಿರುತ್ತಾರೆ.

ದಿನಾಂಕ 22-02-2018 ರಂದು ನಿವೇಶನ ಸಂಖ್ಯೆ 820ಬಿ ಮತ್ತು 820ಡಿ ರ ಮಾಲೀಕರಾದ ಸಿರಾಜುನ್ನೀಸಾ ಕೋಂ ಗೌಸ್ ಸಾಹೇಬ್ ಎಂಬವರು ತಮ್ಮ ವಕೀಲರ ಮುಖೇನ ವರದಿ ಸಲ್ಲಿಸಿದ್ದು, ತಾವು ಕಾನೂನು ಬದ್ಧವಾಗಿ ನಿವೇಶನಗಳನ್ನು ಐಟಿಐ ಬಡಾವಣೆಯ ಹಂಚಿಕೆದಾರರರಿಂದ ಖರೀದಿಸಿದ್ದಾಗಿ ತಿಳಿಸಿ ಸದರಿ ನಿವೇಶನಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಮತ್ತು ಬಿ ಖಾತೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ 05-03-2018 ರಂದು ನಿವೇಶನ ಸಂಖ್ಯೆ 820ಎಫ್ ರ ಮಾಲೀಕರಾದ ಶ್ರೀಮತಿ ವಿಮಲ ಕೋಂ ಮುನಿಯಪ್ಪ ಎಂಬವರು ತಮ್ಮ ಪತಿಯವರ ಮುಖೇನ ವರದಿ ಸಲ್ಲಿಸಿದ್ದು, ತಾವು ಕಾನೂನು ಬದ್ಧವಾಗಿ ನಿವೇಶನವನ್ನು ಶ್ರೀ ತಾಜುದ್ದೀನ್ ಎಂಬವರಿಂದ ಖರೀದಿಸಿದ್ದಾಗಿ ತಿಳಿಸಿ ಸದರಿ ನಿವೇಶನಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಆದರೆ ಕಟ್ಟಡ ಮಂಜೂರಾತಿ ನಕ್ಷೆ ಪಡೆದಿರುವುದಿಲ್ಲ. ಮತ್ತು ಬಿ ಖಾತೆಯನ್ನು ಹಾಜರುಪಡಿಸಿರುತ್ತಾರೆ.

ದಿನಾಂಕ 07-03-2018 ರಂದು ಶ್ರೀ ರಾಮಸ್ವಾಮಯ್ಯ, ಅಧ್ಯಕ್ಷರು, ಐಟಿಐ ಎಂಪ್ಲಾಯೀಸ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ದೂರವಾಣಿನಗರ, ಬೆಂಗಳೂರು-16 ರವರಿಗೆ ಬಡಾವಣೆಗೆ ಸಂಬಂಧಿಸಿದಂತ ದಾಖಲಾತಿಗಳು ಮತ್ತು ಬಿ.ಡಿ.ಎ ವತಿಯಿಂದ ನಿವೇಶನ ಬಿಡುಗಡೆ ಪಟ್ಟಿಯೊಂದಿಗೆ ದಿನಾಂಕ 12-03-2018 ರಂದು ವಿಚಾರಣೆಗೆ ಹಾಜರಾಗಲು ಸೂಚಿಸಿ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ 24-05-2018 ರಂದು ಶ್ರೀ ಸತೀಶ್, ಬಿನ್ ಗೋವಿಂದಪ್ಪ, 52 ವರ್ಷ, ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.3 ನೇ ಪೂರ್ವ ಉಪ ವಿಭಾಗ, ಹೆಚ್.ಎಸ್.ಆರ್ ಬಡಾವಣೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಠಾಣೆಗೆ ಹಾಜರಾಗಿ ವಿವರವನ್ನು ಹೇಳಿಕೆಯನ್ನು ನೀಡಿದ್ದು, ಮಂಗಮ್ಮನಪಾಳ್ಯ ಐ.ಟಿ.ಐ ಲೇಔಟನಲ್ಲಿ ಉದ್ಯಾನವನಕ್ಕೆ

...ಸಲಿಟ್ಟಿರುವ ಸ.ನಂ: 18/9 ರ ಜಾಗದಲ್ಲಿ ಅನುಮೋದಿತ ಬಡಾವಣೆ ನಕ್ಷೆಯಂತೆ ಪಾರ್ಕ್ ಎಂದು ಇದ್ದು, ಸದರಿ ಜಾಗವನ್ನು ಸೊಸೈಟಿಯವರು ಬಿ.ಡಿ.ಎ ಗೆ ಮಾಡಿಕೊಟ್ಟಿರುವ ಪರಿತ್ಯಜನ ಪತ್ರದಲ್ಲಿ ನಮೂದು ಮಾಡದೇ ಕೈಬಿಟ್ಟಿರುವುದು ಕಂಡು ಬಂದಿರುತ್ತದೆ. ನಂತರ ಸದರಿ ಪಾರ್ಕ್ ಜಾಗವನ್ನು 820ಎ ರಿಂದ 820ಎಫ್ ಎಂದು ವಿವಿಧ ಅಳತೆಯ ಆರು ನಿವೇಶನಗಳನ್ನಾಗಿ ಪರಿವರ್ತಿಸಿ ಮಾರಾಟ ಮಾಡಿರುವುದು ಕಂಡುಬಂದಿರುತ್ತದೆ. ಹಾಗೂ ಈ ಪೈಕಿ ಸದರಿ ಕೆಲವು ನಿವೇಶನಗಳಲ್ಲಿ ಕಟ್ಟಡ ನಿರ್ಮಾಣ ಆಗಿದ್ದು, ಇನ್ನು ಕೆಲವು ಖಾಲಿ ಇರುತ್ತವೆ. ಆದರೆ ಅನುಮೋದಿತ ಬಡಾವಣೆ ನಕ್ಷೆಯಲ್ಲಿ 820ಎ ರಿಂದ 820ಎಫ್ ಎಂಬ ನಿವೇಶನ ಸಂಖ್ಯೆಗಳು ಇರುವುದಿಲ್ಲ. ಆದ್ದರಿಂದ ಸದರಿ ಸ್ವತ್ತು ಅನುಮೋದಿತ ಬಡಾವಣೆ ನಕ್ಷೆಯಂತೆ ಬಿ.ಡಿ.ಎ ಗೆ ಸೇರಿದ್ದಾಗಿರುತ್ತದೆ ಮತ್ತು ಅನುಮೋದಿತ ಬಡಾವಣೆ ನಕ್ಷೆಯಲ್ಲಿ ಉದ್ಯಾನವನಕ್ಕೆ ಮೀಸಲಿಟ್ಟಿರುವ ಸ.ನಂ: 18/9 ರ ಜಾಗವನ್ನು ಐ.ಟಿ.ಐ ಲೇಔಟ್ ಸೊಸೈಟಿಯ ಅಧ್ಯಕ್ಷರು ಬಿ.ಡಿ.ಎ ಪರಿತ್ಯಾಜನ ಪತ್ರದ ಮುಖೇನ ಹಸ್ತಾಂತರಿಸದೆ, ಬಿ.ಡಿ.ಎ ಇಂದ ಮಾರ್ಪಾಡಿತ ನಕ್ಷೆಯನ್ನು ಪಡೆಯದೇ, ಪಾರ್ಕ್‌ನ ಜಾಗವನ್ನು ತಾವೇ ಕಾನೂನಿಗೆ ವಿರುದ್ಧವಾಗಿ 820ಎ ರಿಂದ 820ಎಫ್ ಎಂದು ನಿವೇಶನ ಸಂಖ್ಯೆಗಳನ್ನು ನೀಡಿ ಮಾರಾಟ ಮಾಡಿರುವುದು ಕಂಡು ಬಂದಿದ್ದು, ಹಾಗೂ ಪರಿತ್ಯಾಜನ ಪತ್ರ ಮಾಡಿಕೊಡುವ ಸಮಯ ಬಿ.ಡಿ.ಎ ವಿಭಾಗದ ಕಾರ್ಯಪಾಲಕ ಅಭಿಯಂತರರು ಅನುಮೋದಿತ ಬಡಾವಣೆ ನಕ್ಷೆಯನ್ನು ಪರಿಶೀಲಿಸಿ ಅದರಂತೆ ಉದ್ಯಾನವನ, ಸಿ.ಎ ನಿವೇಶನಗಳನ್ನು ನಮೂದು ಮಾಡಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು ಸದರಿಯವರ ಕರ್ತವ್ಯವಾಗಿರುತ್ತದೆ. ಆದ್ದರಿಂದ ಸದರಿಯವರುಗಳ ವಿರುದ್ಧ ಕಾನೂನು ರೀತ್ಯ ಕ್ರಮ ಕೈಗೊಳ್ಳುವಂತೆ ಕೋರುತ್ತೇನೆ ಎಂದು ತಿಳಿಸಿರುತ್ತಾರೆ.

ಆದ್ದರಿಂದ ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.3 ನೇ ಪೂರ್ವ ಉಪ ವಿಭಾಗ, ಹೆಚ್.ಎಸ್.ಆರ್ ಬಡಾವಣೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರ ವರದಿ ಮತ್ತು ಹೇಳಿಕೆಯಂತೆ ಮಂಗಮ್ಮನಪಾಳ್ಯ ಐ.ಟಿ.ಐ ಎಂಪ್ಲಾಯೀಸ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್ ಬಡಾವಣೆಯಲ್ಲಿನ ಸ.ನಂ 18/9 ಕ್ಕೆ ಸೇರಿದ ಪಾರ್ಕ್ ಜಾಗವನ್ನು ಬಿ.ಡಿ.ಎ ಗೆ ಪರಿತ್ಯಾಜನ ಪತ್ರದ ಮುಖೇನ ಹಸ್ತಾಂತರಿಸದೇ, ಬಿ.ಡಿ.ಎ ಇಂದ ಮಾರ್ಪಾಡಿತ ನಕ್ಷಯನ್ನು ಪಡೆಯದೇ ಕಾನೂನು ಬಾಹಿರವಾಗಿ ನಿವೇಶನ ಸಂಖ್ಯೆ 820ಎ ರಿಂದ 820ಎಫ್ ನಂತೆ ನೀಡಿ ಮಾರಾಟ ಮಾಡಿರುವ ಸೊಸೈಟಿಯ ಅಧ್ಯಕ್ಷರು, ಪರಿತ್ಯಾಜನ ಪತ್ರ ಮಾಡಿಕೊಡುವಾಗ ಮಂಜೂರಾದ ಬಡಾವಣೆ ನಕ್ಷೆಯಂತೆ ಪರಿಶೀಲನೆ ಮಾಡಿ ಸಿ.ಎ ನಿವೇಶನ ಮತ್ತು ಉದ್ಯಾನವನಗಳಿಗೆ ಮೀಸಲಿಟ್ಟ ಜಾಗವನ್ನು ಪರಿತ್ಯಾಜನ ಪತ್ರದಲ್ಲಿ ನಮೂದಾಗಿದೆಯೇ ಇಲ್ಲವೇ ಎಂದು ಖಾತರಿ ಪಡಿಸಿಕೊಳ್ಳದ ಕಾರ್ಯಪಾಲಕ ಅಭಿಯಂತರರು, (ಪೂರ್ವ) ಉಪವಿಭಾಗ, ಬಿ.ಡಿ.ಎ ಮತ್ತು ಹಾಲಿ ಸದರಿ ನಿವೇಶನಗಳನ್ನು ಖರೀದಿಸಿರುವ ಮಾಲೀಕರುಗಳಾದ ಶ್ರೀಮತಿ ಸಿರಾಜುನ್ನೀಸಾ, ಶ್ರೀಮತಿ ವಿಮಲ ಮತ್ತಿತರರು ಬಿ.ಡಿ.ಎ ಜಾಗವನ್ನು ಅಕ್ರಮವಾಗಿ ಲಾಭ ಮಾಡುವ ಉದ್ದೇಶದಿಂದ ಮಾರಾಟ/ಖರೀದಿ ಮಾಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿ ಮೋಸಮಾಡಿರುವುದು ದೂರು ಅರ್ಜಿ ವಿಚಾರಣೆಯಿಂದ ದೃಢಪಟ್ಟಿದ್ದು, ಸದರಿಯವರುಗಳ ವಿರುದ್ಧ ಕಾನೂನು ರೀತ್ಯ ಕ್ರಮ ಕೈಗೊಳ್ಳುವ ಸಂಬಂಧ ಪ್ರಕರಣ ದಾಖಲು ಮಾಡಲು ತಮ್ಮ ಆದೇಶ ಕೋರಿ ವಿಚಾರಣಾ ವರದಿಯನ್ನು ಮಂಡಿಸಿದೆ.

(ಅಮರೇಶ್‌ಗೌಡ.ಪಿ)

ಪಿ.ಎಸ್.ಐ

ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ

# FIRST INFORMATION REPORT

**(Under Section 154 Crpc)**

[ Before the Honorable 4th ACMM Court, Bengaluru City ]

1. Crime No: **44/2018** Police Station: Bengaluru Metropolitan Task Force

FIR Date: 22-06-2018 TIME: 16-00 hrs. District : Bengaluru City

Type : Computer Typed State : Karnataka

2. Act and Section:**72 BDA Act and 120(B), 409 IPC**

3. (a) Occurrence of offence: From: Prior to 24-05-2018

Time from: 00:00:00 Hrs. Day:

(b) Information received at P.S: Date: 22-06-2018

(c) Type of Information: Written (Computer typed)

4. Place of occurrence: **BDA Head Office, Kumarakrupa West, T.Choudaiah Road, Bangalore-560020.**

(a) Direction and Distance from Police Station: 10 **Kms towards North**

(b) In Case outside limits of this police Station then Name of P.S: Dist.

5. Complainant/Informant.

(a) Name: **Sri. Deepak.V.R** (b) Father Name:

(c) Age : (d) Nationality: **Indian**

(e) Passport No: (f) Date of Issue:

(g) Place of Issue: (h) Occupation: **Police Sub-Inspector**

Address: **B.M.T.F Police Station, N.R Square, BBMP Head Office, Bengaluru.**

6. Details of Known/ Suspected/Unknown Accused with Full Particulars:

1. **Venkataramanappa, BDA Employee**
2. **K.Rajendra Kumar, BDA Employee (RTD)**
3. **Other Concerned BDA Officials.**
4. **Concerned Agents/Mediators.**

**7.** Reasons for Delay in reporting by the Complainant/Informant:

**8.** Particulars of Properties stolen/ involved:

**9.** Total Value of Properties Stolen/involved:

**10.** Inquest reports/U.D Case no if any:

**11.** Brief facts: **As attached**

(1) Detected (Name of I.O): Ravi.M.S Rank: Police Sub-Inspector
(2) Refused Investigation due to
(3) On Point of jurisdiction transferred to PS District:
(a) Read over to the complainant informant, admitted to be correctly recorded, and a copy given to the complainant/Informant free Cost.? Yes
(b) If the Police Officer does not proceed to the spot for investigation of if he declines to investigate/S 157 Cr.P.C provision (a) or (b) the reason there of should be mentioned.

**12.** Action Taken: **Investigation.**

**13.** Signature/Thumb impression of complainant.

**14.** Date and time of dispatch to the court : 22-06-2018 at 16-15 hrs.

**15.** Name of the PC/HC who carried the FIR to the Court:- Chandrashekar CPC

Signature of the I.O

Name of the I.O. (Ravi.M.S)
Rank: Police Sub-Inspector
Police Station: BMTF

Police Sub-Inspector
B.M.T.F. Police Station
Bengaluru.

**Copy To**

1. Additional Director Genaral Of Police, Bengaluru.
2. Superintendent of Police BMTF, Bengaluru City.
3. Dysp, BMTF, Bengaluru City.
4. Complaint Copy/Officer Copy.

ನಂ.ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/158/2018

ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ,
ಬೆಂಗಳೂರು ನಗರ.
ದಿನಾಂಕ: 22-06-2018

ರವರಿಗೆ,

ಠಾಣಾಧಿಕಾರಿ
ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ,
ಬೆಂಗಳೂರು.

ಮಾನ್ಯರೆ,

| ವಿಷಯ: | ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಿಸಲು ವಿಚಾರಣ ವರದಿಯನ್ನು ಸಲ್ಲಿಸುತ್ತಿರುವ ಬಗ್ಗೆ. |
|---|---|
| ಉಲ್ಲೇಖ: | ನಂ.ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/158/2018 ದಿನಾಂಕ: 24-05-2018 |

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಯಶವಂತಪುರ ಗ್ರಾಮದ ಸರ್ವೇ ನಂ. 154(ಎ) ಬ್ಲಾಕ್-1 ಮತ್ತು 154 (ಎ) ಬ್ಲಾಕ್ 2 ರ ನಿವೇಶನಗಳಿಗೆ ಸಂಬಂಧಿಸಿದಂತೆ ಬದಲಿ ನಿವೇಶನ ನೀಡುವ ಪ್ರಕ್ರೀಯೆಯಲ್ಲಿ ವಿಷಯ ನಿರ್ವಾಹಕರಾದ ಶ್ರೀ ವಿ. ವೆಂಕಟರಮಣಪ್ಪ ಮತ್ತು ಇತರೆ ಬಿ.ಡಿ.ಎ ಅಧಿಕಾರಿಗಳು ಎ.ಪಿ.ಎಂ.ಸಿ ರವರಿಂದ ರೂ.10,24,32,175/- (ಹತ್ತು ಕೋಟಿ ಇಪತ್ತು ನಾಲ್ಕೂ ಲಕ್ಷ ಮೂವತ್ತು ಎರಡು ಸಾವಿರಾ, ನೂರು ಎಪತ್ತೈದು ರೂಪಾಯಿ ಮಾತ್ರ) ಪಾವತಿಸಿಕೊಳ್ಳದೇ, ಸರ್ಕಾರಕ್ಕೆ ನಷ್ಟ ಮಾಡಿರುವುದಲ್ಲದೇ ಭ್ರಷ್ಟಾಚಾರ ಎಸಗಿರುವ ಬಗ್ಗೆ ಹಾಗೂ ಇವರ ವಿರುದ್ಧ ಕಾನೂನು ಕ್ರಮ ಜರುಗಿಸುವಂತೆ ಶ್ರೀ. ಬಿ.ಎಮ್. ಚಿಕ್ಕಣ್ಣ ಹಾಗೂ ಇತರರು ನೀಡಿದ ದೂರು ಅರ್ಜಿಯನ್ನು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಬಿಎಂಟಿಎಫ್ ರವರ ಕಛೇರಿಯಲ್ಲಿ ಸ್ವೀಕರಿಸಿ ಉಲ್ಲೇಖದಂತೆ ದಾಖಲಾಗಿರುತ್ತದೆ.

ಉಲ್ಲೇಖದ ದೂರು ಅರ್ಜಿಯನ್ನು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು ರವರು ಮುಂದಿನ ಅಗತ್ಯ ಕ್ರಮ ಜರುಗಿಸುವಂತೆ ನನಗೆ ಸೂಚಿಸಿದ್ದ ಮೇರೆಗೆ ಈ ಕೆಳಕಂಡಂತೆ ವಿಚಾರಣೆಯನ್ನು ಕೈಗೊಂಡಿರುತ್ತೇನೆ.

ದಿನಾಂಕ: 26-05-2018 ರಂದು, ಶ್ರೀ: ರಾಜೇಂದ್ರ ಕುಮಾರ್, ಮೇಲ್ವಿಚಾರಕರು, ಉಪಕಾರ್ಯದರ್ಶಿ-01 ಕಛೇರಿ, ಹಾಗೂ ಶ್ರೀ. ವಿ. ವೆಂಕಟರಮಣಪ್ಪ, ವಿಷಯ ನಿರ್ವಾಹಕ, ಉಪ ಕಾರ್ಯದರ್ಶಿ-4 ಕಛೇರಿ, ಬಿಡಿಎ ರವರುಗಳಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ: 28-05-2018 ರಂದು, ಶ್ರೀಮತಿ ಕಮಲಬಾಯಿ ಹಾಗೂ ಶ್ರೀ. ಎಂ.ಆರ್ ಕೃಷ್ಣರಾವ್ ರವರಿಗೆ ಬಿ.ಡಿ.ಎ ಯಿಂದ ಹಂಚಿಕೆ ಆಗಿರುವ ಎಲ್ಲಾ ನಿವೇಶನಗಳಿಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ: 01-06-2018 ರಂದು, ಶ್ರೀಮತಿ ಕಮಲಬಾಯಿ ಹಾಗೂ ಶ್ರೀ. ಎಂ.ಆರ್ ಕೃಷ್ಣರಾವ್ ರವರಿಗೆ ಬಿ.ಡಿ.ಎ ಯಿಂದ ಹಂಚಿಕೆ ಆಗಿರುವ ಎಲ್ಲಾ ನಿವೇಶನಗಳಿಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಎರಡನೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ಹಾಗೂ ಇದೇ ದಿನ ಕಾರ್ಯದರ್ಶಿಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮೀತಿ ರವರಿಗೆ ಸದರಿ ದೂರಿಗೆ ಸಂಬಂಧಪಟ್ಟ ಎಲ್ಲಾ ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ: 04-06-2018 ರಂದು, 1) ಶ್ರೀ. ರಾಜೇಂದ್ರ ಕುಮಾರ್, ಮೇಲ್ವಿಚಾರಕರು, ಉಪಕಾರ್ಯದರ್ಶಿ-01 ಕಛೇರಿ, ಬಿಡಿಎ ರವರಿಗೆ ವಿಚಾರಣೆಗೆ ಹಾಜರಾಗುವಂತೆ ಎರಡನೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ. 2) ಶ್ರೀ. ವಿ. ವೆಂಕಟರಮಣಪ್ಪ, ವಿಷಯ ನಿರ್ವಾಹಕ, ಉಪ ಕಾರ್ಯದರ್ಶಿ-4 ಕಛೇರಿ, ಬಿಡಿಎ ರವರಿಗೆ ವಿಚಾರಣೆಗೆ ಹಾಜರಾಗುವಂತೆ ಎರಡನೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ. 3) ಕಂದಾಯ ಅಧಿಕಾರಿಗಳು, ಕಂದಾಯ ಕಛೇರಿ, ಪಶ್ಚಿಮ ವಿಭಾಗ, ಬಿ.ಡಿ.ಎ, ವಿಜಯನಗರ, ಬೆಂಗಳೂರು ರವರಿಗೆ ಸದರಿ ದೂರಿನ ನಿವೇಶನಗಳಿಗೆ ಈಗ ಯಾರ ಹೆಸರಿನಲ್ಲಿ ಖಾತಾ ನಮೂದಾಗಿರುತ್ತದೆ ಮತ್ತು ಅವರ ಪೂರ್ತಿ ವಿಳಾಸದ ವಿವರಗಳನ್ನು ನೀಡಲು ಕೋರಿ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ. 4) ಕಂದಾಯ ಅಧಿಕಾರಿಗಳು, ಕಂದಾಯ ಕಛೇರಿ, ಪಶ್ಚಿಮ ವಿಭಾಗ, ಬಿ.ಡಿ.ಎ, ವಿಜಯನಗರ, ಬೆಂಗಳೂರು ರವರಿಗೆ ಸರ್.ಎಂ.ವಿಶ್ವೇಶ್ವರಯ್ಯ ಬಡಾವಣೆ 3 ನೇ ಬ್ಲಾಕಿನಲ್ಲಿ 15*24 ಮೀ ಅಳತೆಯ ನಿವೇಶನ ಸಂಖ್ಯೆ: 462, 463, 464, 9 ನೇ ಬ್ಲಾಕ್‌ನಲ್ಲಿ 24.36*15.23 ಮೀ. ಅಳತೆಯ ನಿವೇಶನ ಸಂಖ್ಯೆ 1002, 1003 ಹಾಗೂ 12*18 ಮೀ ಅಳತೆಯ ನಿವೇಶನ ಸಂಖ್ಯೆ 1015, 1016, 1017, 1018 ಮತ್ತು 9*12 ಮೀ ಅಳತೆಯ ನಿವೇಶನ ಸಂಖ್ಯೆ: 1021, 1022, 1023, 1024 ನಿವೇಶನಗಳಿಗೆ ಬಿ.ಡಿ.ಎ ಖಾತಾ ಮಾಡದಂತೆ ತಡೆಹಿಡಿಯಲು ಪೊಲೀಸ್ ನೋಟಿಸ್ ಮೂಲಕ ತಿಳಿಸಿರುತ್ತೇನೆ.

ದಿನಾಂಕ: 05-06-2018 ರಂದು, ಕಾರ್ಯದರ್ಶಿಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮೀತಿ ರವರು ತಮ್ಮ ಕಛೇರಿ ಪತ್ರ ಸಂಖ್ಯೆ: ಕೃಉಮಾಸ(ಬೆಂ)/ಭೂಸ್ವಾ/1455/2018-19 ರಂತೆ ವರದಿಯನ್ನು ನೀಡಿರುತ್ತಾರೆ.

ದಿನಾಂಕ: 06-06-2018 ರಂದು, ಕೆ. ರಾಜೇಂದ್ರ ಕುಮಾರ್, ಮೇಲ್ವಿಚಾರಕರು, ಉಪ ಕಾರ್ಯದರ್ಶಿ-1 ಕಛೇರಿ, ಬಿ.ಡಿ.ಎ ಹಾಗೂ ಬಿ. ವೆಂಕಟರಮಣಪ್ಪ, ವಿಷಯ ನಿರ್ವಾಹಕ, ಉಪ ಕಾರ್ಯದರ್ಶಿ-4 ಕಛೇರಿ ಬಿಡಿಎ ರವರುಗಳು ವಿಚಾರಣೆಗೆ ಹಾಜರಾದ ಮೇರೆಗೆ ಅವರು ನೀಡಿರುವ ಹೇಳಿಕೆ ಹಾಗೂ ದಾಖಲಾತಿಗಳನ್ನು ಪಡೆದು ಕಡತದಲ್ಲಿ ಅಡಕಗೊಳಿಸಿರುತ್ತೇನೆ.

ದಿನಾಂಕ: 07-06-2018 ರಂದು, ಕಂದಾಯ ಅಧಿಕಾರಿ, ಪಶ್ಚಿಮ ವಿಭಾಗ, ವಿಜಯಬಗರ, ಬಿ.ಡಿ.ಎ ರವರು ತಮ್ಮ ಕಛೇರಿ ಪತ್ರ ಸಂಖ್ಯೆ: ಬೆಂ.ಅ.ಪ್ರಾ/ಕಂ.ಅ(ಪ)/977/2018-19 ರಂತೆ ವರದಿಯನ್ನು ನೀಡಿರುತ್ತಾರೆ.

ದಿನಾಂಕ: 13-06-2018 ರಂದು, ಶ್ರೀಮತಿ ಕಮಲಬಾಯಿ ಹಾಗೂ ಶ್ರೀ. ಎಂ.ಆರ್ ಕೃಷ್ಣರಾವ್ ರವರಿಗೆ ವಿಚಾರಣೆಗೆ ಹಾಜರಾಗಿ ಹೇಳಿಕೆ ನೀಡುವಂತೆ ಅಂತಿಮ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ: 19-06-2018 ರಂದು ಶ್ರೀ. ಎಂ.ಆರ್ ಕೃಷ್ಣರಾವ್ ರವರು ವಿಚಾರಣೆಗೆ ಹಾಜರಾದ ಮೇರೆಗೆ ಅವರು ನೀಡಿದ ಹೇಳಿಕೆ ಹಾಗೂ ದಾಖಲಾತಿಗಳನ್ನು ಪಡೆದು ಕಡತದಲ್ಲಿ ಅಡಕಗೊಳಿಸಿರುತ್ತೇನೆ. ಹಾಗೂ ಇದೇ ದಿನ ಕಾರ್ಯದರ್ಶಿಗಳು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರಿಗೆ ಸಂಬಂಧಿಸಿದ ಮಾಹಿತಿ ಹಾಗೂ ವರದಿಯೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ: 21-06-2018 ರಂದು, ಕಾರ್ಯದರ್ಶಿಗಳು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರು ತಮ್ಮ ಕಛೇರಿ ಪತ್ರದ ಸಂಖ್ಯೆ: ಬೆಂ.ಅಪ್ರಾ/ಕಾವಿ/31/2018-19 ರಂತೆ ವಿಚಾರಣೆಯ ದಿನಾಂಕಕ್ಕೆ ಸಂಬಂಧಿಸಿದಂತೆ ಪತ್ರವನ್ನು ಬರೆದಿರುತ್ತಾರೆ.

## ಇಲ್ಲಿವರೆಗಿನ ವಿಚಾರಣೆಯಿಂದ ಹಾಗೂ ದಾಖಲಾತಿಗಳಿಂದ ಈ ಕೆಳಕಂಡ ಅಂಶಗಳು ಕಂಡುಬಂದಿರುತ್ತದೆ.

1. ಕಾರ್ಯದರ್ಶೀ ಕೃಷಿ ಉತ್ಪನ್ನ ಮಾರುಕಟ್ಟೆ ಸಮೀತಿ ರವರು ತಮ್ಮ ಕಛೇರಿ ಪತ್ರ ಸಂಖ್ಯೆ: ಕೃಉಮಾಸ(ಬೆಂ)ಭೂಸ್ವಾ/1455/2018-19 ದಿನಾಂಕ: 05-08-2018 ರಂತೆ ನೀಡಿದ ವರದಿಯಿಂದ ಯಶವಂತಪುರ ಮಾರುಕಟ್ಟೆ ಪ್ರಾಂಗಣಕ್ಕೆ ಸೇರಿದ ಸರ್ವೇ ನಂ. 144, 145, 146, 147, 148 ಮತ್ತು 149 ರಲ್ಲಿ ಒಟ್ಟು 38 ಎಕರೆ 09 ಗುಂಟೆ ಜಮೀನನ್ನು ಸಂಬಂಧಪಟ್ಟ ರೈತರಗಳಿಂದ ಮೈಸೂರು ಭೂ-ಸ್ವಾಧೀನ ಕಾಯ್ದೆ 1894 ರ ಕಲಂ 6ರ ಅನ್ವಯ ಅಧಿಸೂಚನೆ ದಿನಾಂಕ: 29-08-1960 ಮೂಲಕ ಭೂ-ಸ್ವಾಧಿನ ಪಡಿಸಿಕೊಂಡು ಕೃಷಿ ಹುಟ್ಟುವಳಿಗಳ ವ್ಯಾಪಾರ ವಹಿವಾಟಿಗಾಗಿ ಮಾರುಕಟ್ಟೆ ಪ್ರಾಂಗಣದ ನಿರ್ಮಾಣಕ್ಕಾಗಿ ಕಾಲಕಾಲಕ್ಕೆ ಸದರಿ ಭೂ-ಸ್ವಾಧಿನದ ಜಮೀನುಗಳಿಗೆ ತಗಲುವ ಭೂ-ಪರಿಹಾರ ವೆಚ್ಚವನ್ನು ಭರಿಸಿಕೊಳ್ಳುವ ಮೂಲಕ ದಿನಾಂಕ: 05-11-1962 ರಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮೀತಿಗೆ ಹಂಚಿಕೆ ಮಾಡಿರುವ ಬಗ್ಗೆ ತಿಳಿದುಬಂದಿರುತ್ತದೆ.

2. ಶ್ರೀ. ಎಂ.ಆರ್ ಕೃಷ್ಣರಾವ್ ರವರ ಹೇಳಿಕೆಯಿಂದ, ದಿನಾಂಕ: 21-02-1963 ರಂದು ತಮ್ಮ ತಂದೆಯವರಾದ ಶ್ರೀ. ಎಂ.ಎಸ್ ರಾಮ್‌ರಾವ್ ರವರು ಬಾಗಲ್‌ಗುಂಟೆ ಜೋಡಿದಾರ್ ಶ್ರೀ ನಂಜಪ್ಪ ರವರಿಂದ ಯಶವಂತಪುರ ಗ್ರಾಮದ ಸರ್ವೇ ನಂ. 146 ರಲ್ಲಿ 32 ಗುಂಟೆ ಜಮೀನನ್ನು ನೊಂದಣಿ ಕ್ರಯಪತ್ರದ ಮೂಲಕ ಖರೀದಿ ಮಾಡಿರು ಬಗ್ಗೆ ತಿಳಿಸಿರುತ್ತಾರೆ.

3. ದಿನಾಂಕ: 29-05-2014 ರಂದು, ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿ ಸಂಖ್ಯೆ: 100/2010 ರ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀ. ಬಿ. ವೆಂಕಟರಮಣಪ್ಪ ನವರು ಸದರಿ ಹಂಚಿಕೆ ಪ್ರಕ್ರೀಯೆಯನ್ನು ಚಾಲನೆ ಮಾಡಿ, ಶ್ರೀಮತಿ ಕಮಲಬಾಯಿ ಹಾಗೂ ಅವರ ಮಗ ಶ್ರೀ. ಎಂ.ಆರ್ ಕೃಷ್ಣರಾವ್ ರವರಿಗೆ ಸರ್.ಎಂ.ವಿಶ್ವೇಶ್ವರೈಯ ಬಡಾವಣೆಯಲ್ಲಿ ವಿವಿಧ ಅಳತೆಯ ಒಟ್ಟು 13 ನಿವೇಶನಗಳನ್ನು ದಿನಾಂಕ: 18-07-2017 ರಂದು ನೊಂದಣಿ ಮಾಡಿಕೊಟ್ಟು ಮತ್ತು ಸದರಿ ನಿವೇಶನಗಳ ಸ್ವಾಧೀನ ಪತ್ರಗಳನ್ನು ದಿನಾಂಕ: 19-07-2017 ರಂದು ನೀಡಿರುವುದು ಕಂಡುಬಂದಿರುತ್ತದೆ.

4. ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ತಮ್ಮ ಕಛೇರಿ ಪತ್ರದ ಸಂಖ್ಯೆ: ನಇ/414/ಬೆಂಭೂಸ್ವಾ/2011 ದಿನಾಂಕ: 03-01-2018 ರಂತೆ ಶ್ರೀಮತಿ ಕಮಲಬಾಯಿ ಹಾಗೂ ಅವರ ಮಗ ಶ್ರೀ. ಎಂ.ಆರ್ ಕೃಷ್ಣರಾವ್ ರವರಿಗೆ ಸರ್. ಎಂ. ವಿಶ್ವೇಶ್ವರೈಯ ಬಡಾವಣೆಯಲ್ಲಿ ಹಂಚಿಕೆ ಮಾಡಿರುವ ಪ್ರಕ್ರಿಯೇಯಲ್ಲಿ ಈವರೆಗೂ ನಿವೇಶನ ಮೌಲ್ಯವನ್ನು ಪಾವತಿಸಿಕೊಳ್ಳದೆ ಪ್ರಾಧಿಕಾರವು ನೇರವಾಗಿ ಅರ್ಜಿದಾರರಿಗೆ ಕ್ರಯಪತ್ರ ಹಾಗೂ ಸ್ವಾಧೀಮಪತ್ರ ನೀಡಿರುವ ಬಗ್ಗೆ ಕಾರಣಗಳು ಹಾಗೂ ಅಧಾರಗಳ ವಿವರ ನೀಡಲು ಕೋರಿ ಹಾಗೂ ನಿವೇಶನಗಳ ಮೊತ್ತವನ್ನು ತುರ್ತು ಪಾವತಿಸಿಕೊಳ್ಳಲು ಪ್ರಾಧಿಕಾರವು ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ಮಾಹಿತಿಯನ್ನು ಕೂಡಲೇ ಸರ್ಕಾರಕ್ಕೆ ಕಳುಹಿಸಿಕೊಡುವಂತೆ ಕೋರಿ ಮಾನ್ಯ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರಿಗೆ ಪತ್ರವನ್ನು ಬರೆದಿರುವುದು ಕಂಡುಬಂದಿರುತ್ತದೆ.

5. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ (ನಿವೇಶನಗಳ ಹಂಚಿಕೆ) ನಿಯಮಗಳು 1984 ರನ್ವಯ ಹಂಚಿಕೆದಾರರಿಗೆ ಹಂಚಿಕೆ ಪತ್ರ ನೀಡುವಾಗ ಆ ನಿವೇಶನಕ್ಕೆ ಸಂಬಂಧಿಸಿದಂತೆ ಪಾವತಿಸಬೇಕಾಗಿರುವ ನಿವೇಶನ ಮೌಲ್ಯವನ್ನು ನಿಗಧಿತ ಅವಧಿಯೊಳಗೆ ಪಾವತಿಸುವಂತೆ ಸೂಚನೆ ನೀಡಿ, ಅದರಂತೆ ಹಂಚಿಕೆದಾರರು ನಿವೇಶನ ಮೌಲ್ಯ ಪಾವತಿಸಿದ ನಂತರವೇ ಸ್ವಾಧೀನಪತ್ರ ಹಾಗೂ ಕ್ರಯಪತ್ರ ನೀಡಬೇಕಾಗಿರುತ್ತದೆ ಎಂಬ ಅಂಶದ ಬಗ್ಗೆ ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ರವರ ಪತ್ರದ ಸಂಖ್ಯೆ: ನಇ/414/ಬೆಂಭೂಸ್ವಾ/2011 ದಿನಾಂಕ: 03-01-2018 ರಲ್ಲಿ ತಿಳಿಸಿರುವುದು ಕಂಡುಬಂದಿರುತ್ತದೆ.

6. ವಿಚಾರಣೆಯಿಂದ, ಹಂಚಿಕೆ ಆಗಿರುವ ನಿವೇಶನಗಳಿಗೆ ಬಿ.ಡಿ.ಎ ಅಧಿಕಾರಿಗಳು ಹಣ ಪಾವತಿ ಮಾಡಸಿಕೊಳ್ಳದೆ ಇರುವುದು ತಿಳಿದುಬಂದಿರುತ್ತದೆ. ಹಾಗೂ ಸದರಿ ನಿವೇಶನಗಳ ಹಂಚಿಕೆಯನ್ನು ರದ್ದು ಪಡಿಸಲು ಯಾವುದೇ ಕ್ರಮವನ್ನು ಕೂಡ ವಹಿಸದೇ ಇರುವುದು ಕಂಡುಬಂದಿರುತ್ತದೆ.

ಮೇಲಿನ ಅಂಶಗಳ ಅನ್ವಯ, ವಿಷಯ ನಿರ್ವಾಹಕರಾದ ಶ್ರೀ. ವೆಂಕಟರಮಣಪ್ಪ, ಮೇಲ್ವಿಚಾರಕರಾದ ಶ್ರೀ ಕೆ. ರಾಜೇಂದ್ರ ಕುಮಾರ್ ರವರು ಹಾಗೂ ಸಂಬಂಧಪಟ್ಟ ಇತರೆ ಬಿಡಿಎ ಅಧಿಕಾರಿಗಳು ನಿವೇಶನಗಳ ಹಂಚಿಕೆದಾರರಾದ ಶ್ರೀಮತಿ ಕಮಲಬಾಯಿ ಹಾಗೂ ಅವರ ಮಗ ಶ್ರೀ. ಎಂ.ಆರ್ ಕೃಷ್ಣರಾವ್ ರವರುಗಳಿಗೆ ಅರ್ಥಿಕ ಲಾಭವನ್ನು ಗಳಿಸಿಕೊಡಲು ಮಧ್ಯವರ್ತಿಗಳೊಂದಿಗೆ ಸಂಚು ರೂಪಿಸಿ, ವಂಚನೆ ಹಾಗೂ ಕರ್ತವ್ಯ ನಿರ್ಲಕ್ಷ್ಯ

ಮಾಡಿರುವುದಲ್ಲದೇ ಪ್ರಾಧಿಕಾರದ ಬೊಕ್ಕಸಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟ ಉಂಟು ಮಾಡಲು ನೇರವಾಗಿ ಕಾರಣಕರ್ತರಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ.

ಆದ್ದರಿಂದ, ದೂರು ಅರ್ಜಿಯಲ್ಲಿ ತಿಳಿಸಿರುವ ಸದರಿ ನಿವೇಶನಗಳ ಹಂಚಿಕೆ ಪ್ರಕ್ರೀಯೆಯಲ್ಲಿ ಆಗಿರುವ ಲೋಪ-ದೋಷಗಳನ್ನು ಕುಲಂಕುಶವಾಗಿ ಹಾಗೂ ಸಮಗ್ರವಾಗಿ ತನಿಖೆ ಮಾಡಬೇಕಾಗಿರುವುದರಿಂದ 1) ಶ್ರೀ. ವೆಂಕಟರಮಣಪ್ಪ, 2) ಶ್ರೀ ಕೆ. ರಾಜೇಂದ್ರ ಕುಮಾರ್, 3) ಸಂಬಂಧಪಟ್ಟ ಇತರೆ ಬಿಡಿಎ ಅಧಿಕಾರಿಗಳು, ಹಾಗೂ 4) ಸಂಬಂಧಪಟ್ಟ ಮಧ್ಯವರ್ತಿಗಳ ವಿರುದ್ಧ ಪ್ರಕರಣ ದಾಖಲಿಸಿ ತನಿಖೆ ನಡೆಸಲು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಬಿಎಂಟಿಎಫ್, ರವರು ಸದರಿ ಕಡತದ ಟಿಪ್ಪಣಿ ಕಂಡಿಕೆ (16) ರಂತೆ ಅನುಮತಿಯನ್ನು ನೀಡಿರುತ್ತಾರೆ.

ಆದ್ದರಿಂದ, ಮುಂದಿನ ಕ್ರಮಕ್ಕಾಗಿ ವರದಿಯೊಂದಿಗೆ ನಿವೇದಿಸಿಕೊಂಡಿರುತ್ತೇನೆ.

22/6/18

ದೀಪಕ್ ವಿ. ಆರ್.
ಪೊಲೀಸ್ ಸಬ್ ಇನ್ಸ್‌ಪೆಕ್ಟರ್
ಬಿ.ಎಂ.ಟಿ.ಎಫ್. ಪೊಲೀಸ್ ಠಾಣೆ
ಬೆಂಗಳೂರು

ದಿನಾಂಕ 22-06-2018 ರಂದು 1600 ಗಂಟೆಗೆ [illegible] ಠಾಣಾ ಮೊ.ಸಂ 44/2018 ಕಲಂ 72 BDH ಕಾಯ್ದೆ, 409, 120(B) IPC ರೀತ್ಯಾ [illegible]

22/6

(3)

# FIRST INFORMATION REPORT

**(Under Section 154 Crpc)**

[ Before the Honorable CMM Court, Bengaluru City ]

1. Crime No: **45/2018** Police Station: Bengaluru Metropolitan Task Force

FIR Date: 26-06-2018 TIME: 14-00 hrs. District : Bengaluru City

Type : Computer Typed State : Karnataka

2. Act and Section: **436(A) KMC Act and 217 IPC**

3. (a) Occurrence of offence: From: Prior to 23-11-2017

Time from: 00:00:00 Hrs. Day:

(b) Information received at P.S: Date: 26-06-2018

(c) Type of Information: Written (Computer typed)

4. Place of occurrence: **Survey No.72/1, 72/2, Belattur Village, Bidarahalli Hobli, K.R Puram Taluk, Bengaluru East Taluk.**

(a) Direction and Distance from Police Station: 20 **Kms towards East**

(b) In Case outside limits of this police Station then Name of P.S: Dist.

5. Complainant/Informant.

(a) Name: **Sri. Ravi M.S** (b) Father Name:

(c) Age : (d) Nationality: **Indian**

(e) Passport No: (f) Date of Issue:

(g) Place of Issue: (h) Occupation: **Police Sub-Inspector**

Address: **B.M.T.F Police Station, N.R Square, BBMP Head Office, Bengaluru.**

6. Details of Known/ Suspected/Unknown Accused with Full Particulars:

1. **Property Owners of Survey No.72/1 and 72/2 of Belattur Village.**
2. **Concerned Officials, Storm Water Drain Division, Mahadevapura Zone.**

7. Reasons for Delay in reporting by the Complainant/Informant:

8. Particulars of Properties stolen/ involved:

9. Total Value of Properties Stolen/involved:

10. Inquest reports/U.D Case no if any:

11. Brief facts: **As attached**

(1) Detected (Name of I.O): Amaresh Gowda.A Rank: Police Sub-Inspector
(2) Refused Investigation due to
(3) On Point of jurisdiction transferred to PS District:
(a) Read over to the complainant informant, admitted to be correctly recorded, and a copy given to the complainant/Informant free Cost.? Yes
(b) If the Police Officer does not proceed to the spot for investigation of if he declines to investigate/S 157 Cr.P.C provision (a) or (b) the reason there of should be mentioned.

12. Action Taken: **Investigation.**

13. Signature/Thumb impression of complainant.

14. Date and time of dispatch to the court : 26-06-2018 at 14-15 hrs.

15. Name of the PC/HC who carried the FIR to the Court:- Chandrashekar CPC

Signature of the I.O

26/06/18

Name of the I.O. (Amaresh Gowda.A)
Rank: Police Sub-Inspector
Police Station: BMTF

Police Sub-Inspector
B.M.T.F. Police Station,
Bengaluru.

Copy To

1. Additional Director Genaral Of Police, Bengaluru.
2. Superintendent of Police BMTF, Bengaluru City.
3. Dysp, BMTF, Bengaluru City.
4. Complaint Copy/Officer Copy.

# ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ

(5)

ಪೊಲೀಸ್ ಸಬ್ ಇನ್ಸ್‌ಪೆಕ್ಟರ್,
ಬಿಎಂಟಿಎಫ್ ಪೊಲೀಸ್ ಠಾಣೆ,
ಬೆಂಗಳೂರು ನಗರ ದಿನಾಂಕ:26.06.2018

ರವರಿಗೆ,

ಠಾಣಾಧಿಕಾರಿಗಳು,
ಬೆಂಗಳೂರು ಮಹಾನಗರ ಕಾರ್ಯಚರಣೆ ಪಡೆ,
ಬೆಂಗಳೂರು ನಗರ.

ಮಾನ್ಯರೇ,

ವಿಷಯ: ಪ್ರಕರಣ ದಾಖಲಿಸುವ ಬಗ್ಗೆ.
ಉಲ್ಲೇಖ: 1. ಎಡಿಜಿಪಿ/ಬಿಎಂಟಿಎಫ್/ಪಿಟಿಷನ್-187/2017 ದಿನಾಂಕ:23.11.2017.
2. ಮಾನ್ಯ ಎಡಿಜಿಪಿ ರವರಿಂದ ಪ್ರಾಥಮಿಕ ವಿಚಾರಣಾ ವರದಿ ಅನುಮೋದನೆ ದಿನಾಂಕ:26.06.2018.

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಉಲ್ಲೇಖ (1)ರಂತೆ ದೂರು ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೆಳತ್ತೂರು ಗ್ರಾಮದ ಸರ್ವೆ ನಂ. 72/1 ಹಾಗೂ 72/2 ರಲ್ಲಿ ವಿವೇಕ್ ಕನಸ್ಟ್ರಕ್ಷನ್ ಎಂಬುವವರು ರಾಜಕಾಲುವೆಯನ್ನು ಒತ್ತುವರಿ ಮಾಡಿ, ಬೃಹತ್ ಕಟ್ಟಡವನ್ನು ನಿರ್ಮಾಣ ಮಾಡಿಕೊಂಡಿರುತ್ತಾರೆ. ಹಾಗೂ ಎಲೆಮಲ್ಲಪ್ಪನಕೆರೆಯ ನೀರು ಕಾಲುವೆಯನ್ನು ಒತ್ತುವರಿ ಮಾಡಿಕೊಂಡು, ಕಾಂಕ್ರೀಟ್ ಹಾಕಿಕೊಂಡು ರಸ್ತೆಯನ್ನಾಗಿ ಮಾಡಿಕೊಂಡಿರುವ ಬಗ್ಗೆ ಸುಶೀಲ.ಎಸ್ ರವರು ನೀಡಿದ ದೂರು ಅರ್ಜಿ ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ದಾಖಲಾಗಿದ್ದು, ಅದರಂತೆ ಕೆಳಕಂಡಂತೆ ವಿಚಾರಣೆ ಕೈಗೊಳ್ಳಲಾಗಿರುತ್ತದೆ.

ದಿನಾಂಕ:06.12.2017 ಮತ್ತು 21.12.2017 ರಂದು ಜಯಚಂದ್ರ ರೆಡ್ಡಿ, ಮಾಲೀಕರು, ವಿವೇಕ್ ಕನ್‌ಸ್ಟ್ರಕ್ಷನ್ಸ್, ಬೆಳ್ಳತ್ತೂರು ಗ್ರಾಮ, ಬಿದರಹಳ್ಳಿ ಹೋಬಳಿ, ಬೆಂಗಳೂರು ರವರಿಗೆ ಸದರಿ ಸ್ವತ್ತಿಗೆ ಸಂಬಂಧಪಟ್ಟ ಸಂಪೂರ್ಣ ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ:06.04.2018 ರಂದು ಮುಖ್ಯ ಅಭಿಯಂತರರು, ಬೃಹತ್ ಮಳೆ ನೀರುಗಾಲುವೆ, ಜಯನಗರ ವಾಣಿಜ್ಯ ಸಂಕೀರ್ಣ, 4ನೇ ಬ್ಲಾಕ್, ಜಯನಗರ, ಬೆಂಗಳೂರು ರವರಿಗೆ ಸಂಬಂಧಪಟ್ಟ ಅಧಿಕಾರಿಯವರನ್ನು ನೇಮಿಸಿ ಸ್ಥಳ ಪರಿಶೀಲನೆ ನಡೆಸಿ, ನೀರುಗಾಲುವೆಯ ರಸ್ತೆ ಒತ್ತುವರಿಯಾಗಿದ್ದಲ್ಲಿ, ಒತ್ತುವರಿಯನ್ನು ತೆರವುಗೊಳಿಸಿ, ಕೈಗೊಂಡಿರುವ ಕ್ರಮದ ಬಗ್ಗೆ ವರದಿ ದಾಖಲಾತಿಯೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟೀಸ್ ಜಾರಿ ಮಾಡಿರುತ್ತೇನೆ.

ದಿನಾಂಕ:31.05.2018 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರ., ಬೆಂಗಳೂರು ಮತ್ತು ಜಂಟಿ ಆಯುಕ್ತರು (ಆಸ್ತಿಗಳು), ಬಿಬಿಎಂಪಿ, ಕೇಂದ್ರ ಕಛೇರಿ, ಬೆಂಗಳೂರು ರವರುಗಳಿಗೆ ರಾಜಕಾಲುವೆ ಒತ್ತುವರಿ ಸಂಬಂಧ ತಮ್ಮ ಕಛೇರಿ ಸರ್ವೆಯರ್ ರವರಿಂದ ಸರ್ವೆ ಮಾಡಿಸಿ, ಸರ್ವೆ ಸ್ಕೆಚ್ ಮತ್ತು ಒತ್ತುವರಿದಾರರ ಪಟ್ಟಿಯನ್ನು ಈ ಕಛೇರಿಗೆ ಕಳುಹಿಸಿಕೊಡಲು ಕೋರಿ ಪೊಲೀಸ್ ನೋಟೀಸ್ ಜಾರಿ ಮಾಡಿರುತ್ತೇನೆ.

ದಿನಾಂಕ:06.06.2018 ರಂದು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ರವರ ಪತ್ರ ಸಂಖ್ಯೆ:ಭೂ.ಸ.ನಿ(ಪೋ)ಇತರೆ/76/17-18 ದಿನಾಂಕ:06.06.2018 ರ ಪತ್ರದಲ್ಲಿ ಸದನ ಸಮಿತಿ ಆದೇಶದಂತೆ, ಈ ಹಿಂದೆ ಸದರಿ ಗ್ರಾಮಕ್ಕೆ ಸಂಬಂಧಿಸಿದ ರಾಜಕಾಲುವೆಗಳ ಅಳತೆ ಮಾಡಿ ಮತ್ತು ಒತ್ತುವರಿದಾರರ ಹೆಸರು ಮತ್ತು ಸ್ವರೂಪದೊಂದಿಗೆ ನಕ್ಷೆಗಳನ್ನು ತಯಾರಿಸಿದ್ದು, ಸದರಿ ನಕ್ಷೆಯನ್ನು ಸದನ ಸಮಿತಿಗೆ

ಈಗಾಗಲೇ ಸಲ್ಲಿಸಲಾಗಿರುತ್ತದೆ. ಒತ್ತುವರಿದಾರರ ಪಟ್ಟಿಯನ್ನು ಸಲ್ಲಿಸಿದ್ದು, ಪರಿಶೀಲಿಸಿದಾಗ ಬೆಳತ್ತೂರು ಗ್ರಾಮದ ಸರ್ವೆ ನಂ.72/1,2 ರ ಜಮೀನಿನಲ್ಲಿ 0-04. 1/2 ಜಾಗ ಒತ್ತುವರಿ ಯಾಗಿರುವುದರಿಂದ ಸದರಿ ಜಮೀನಿನಲ್ಲಿ ಒತ್ತುವರಿ ಕಂಡು ಬಂದಿರುವುದರಿಂದ ಸದರಿ ವರದಿಯನ್ನು ಪ್ರಕರಣ ದಾಖಲಿಸಲು ಅನುಮತಿ ಕೋರಿ ವರದಿಯನ್ನು ಅನುಮೋದನೆಗಾಗಿ ಕಡತದೊಂದಿಗೆ ಮಂಡಿಸಿರುತ್ತೇನೆ.

ಈವರೆಗಿನ ತನಿಖೆಯಿಂದ ಕಂಡು ಬಂದಿರುವ ಅಂಶಗಳು

1. ಎದುರು ದೂರುದಾರರಾದ ಜಯಚಂದ್ರ ರೆಡ್ಡಿ, ವಿವೇಕ್ ಕನ್‌ಸ್ಟ್ರಕ್ಷನ್ಸ್, ರವರಿಗೆ ದಿನಾಂಕ:06.12.2017 ಮತ್ತು 21.12.2017 ರಂದು ನೋಟೀಸ್ ನೀಡಿದ್ದರೂ ಹಾಜರಾಗಿರುವುದಿಲ್ಲ ಮತ್ತು ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ.
2. ಸಂಬಂಧಪಟ್ಟ ಕಾರ್ಯಪಾಲಕ ಅಭಿಯಂತರರು ಮತ್ತು ಸಹಾಯಕ ಕಾರ್ಯಪಾಲಕ ಅಭಿಯಂತರರು ರವರಿಗೆ ಒತ್ತುವರಿಯನ್ನು ಖಚಿತಪಡಿಸಿಕೊಂಡು ತೆರವುಗೊಳಿಸಲು ಕ್ರಮ ವಹಿಸಲು ಕೋರಿದ್ದರೂ ಸದರಿಯವರು ಯಾವುದೇ ಕ್ರಮ ವಹಿಸಿರುವುದಿಲ್ಲ.
3. ದಿನಾಂಕ:06.06.2018 ರಂದು ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಪೂರ್ವ ತಾಲ್ಲೂಕು ರವರು ಸಂಖ್ಯೆ:ಭೂ.ಸ.ನಿ(ಪೋ)ಇತರೆ/76/17-18 ರಂತೆ ವರದಿ ನೀಡಿದ್ದು, ವರದಿಯಲ್ಲಿ ಬೆಳತ್ತೂರು ಗ್ರಾಮದ ಸರ್ವೆ ನಂ.72/1 ಮತ್ತು 72/2 ರ ಜಮೀನಿನಲ್ಲಿ ಒಟ್ಟು 0.04 1/2 ಗುಂಟೆ ರಾಜಕಾಲುವೆ ಒತ್ತುವರಿಯಾಗಿರುತ್ತದೆಂದು ವರದಿ ನೀಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ದಿನಾಂಕ:26.06.2018 ರಂದು ಪ್ರಕರಣದಲ್ಲಿ ರಾಜಕಾಲುವೆ ಒತ್ತುವರಿದಾರರಾದ ಬೆಳತ್ತೂರು ಗ್ರಾಮದ ಸ ನಂ.72/1 ಮತ್ತು 72/2 ರ ಜಮೀನಿನ ಮಾಲೀಕರು ಮತ್ತು ಒತ್ತುವರಿಯನ್ನು ತೆರವುಗೊಳಿಸಲು ನಿರ್ಲ್ಯಕ್ಷತೆ ವಹಿಸಿರುವ ಮಹದೇವಪುರ ವಲಯದ ಸಂಬಂಧಪಟ್ಟ ಬೃಹತ್ ಮಳೆ ನೀರುಗಾಲುವೆ ವಿಭಾಗದ ಅಧಿಕಾರಿಗಳ ವಿರುದ್ಧ ಕ್ರಿಮಿನಲ್ ಪ್ರಕರಣ ದಾಖಲಿಸಿ ತನಿಖೆ ಕೈಗೊಳ್ಳುವ ಸಂಬಂಧ ಅನುಮತಿ ಕೋರಿ ಕಡತದೊಂದಿಗೆ ಮಂಡಿಸಲಾಗಿದ್ದು, ಕಡತವನ್ನು ಪರಿಶೀಲಿಸಿ ಮಾನ್ಯ ಎಡಿಜಿಪಿ ರವರು ಪ್ರಕರಣ ದಾಖಲಿಸಲು ಸೂಚನೆ ನೀಡಿ ಪ್ರಾಥಮಿಕ ವಿಚಾರಣಾ ವರದಿಯ ಟಿಪ್ಪಣಿಯಂತೆ ಅನುಮೋದನೆ ನೀಡಿರುತ್ತಾರೆ. ಆದುದರಿಂದ ಸೂಕ್ತ ಕಾನೂನಿನಡಿ ಪ್ರಕರಣ ದಾಖಲಿಸಲು ಕಡತದೊಂದಿಗೆ ಸಲ್ಲಿಸಲಾಗಿರುತ್ತದೆ.

Sub-Inspector of Police
B.M.T.F. Police Station
Bangalore

ದಿನಾಂಕ 26.06.2018 ರಂದು ಮಧ್ಯಾಹ್ನ 2 ಗಂಟೆಗೆ ಪಿಎಸ್ಐ ರವಿ ರವರು ಠಾಣೆಗೆ ಹಾಜರಾಗಿ ನೀಡಿದ ವರದಿಯನ್ನು ಸ್ವೀಕರಿಸಿ ಠಾಣಾ ಮೊ.ನಂ. 45/2018, ಕಲಂ 436(ಎ) ಕೆ.ಎಂ.ಸಿ ಕಾಯ್ದೆ, ಮತ್ತು 217 ಐಪಿಸಿ ರೀತ್ಯಾ ಪ್ರಕರಣ ದಾಖಲಿಸಿಕೊಂಡಿರುತ್ತೇ.

Police Sub-Inspector
B.M.T.F Police Station,
Bangalore

(7)

ರವರಿಗೆ,

ದಿನಾಂಕ:23.11.2017

ಸೂಪರಿಡೆಂಟ್ ಆಫ್ ಪೋಲೀಸ್ /ADGP
ಬಿ.ಎಂ.ಟಿ.ಎಫ್ ಕೇಂದ್ರ ಕಛೇರಿ
ಎನ್.ಆರ್ ವೃತ್ತ
ಬೆಂಗಳೂರು-560001.

Ptn 187/2017
23/11/2017

ಇಂದ,

ಸುಶೀಲ.ಎಸ್
ಗಾಂಧಿಪುರ, 7ನೇ ಅಡ್ಡರಸ್ತೆ
ವೈಟ್‌ಫೀಲ್ಡ್ ಅಂಚೆ, ಬೆಂಗಳೂರು-560066.
ಮೊ: 7022964273

PSI ... 24/XI

ವಿಷಯ: ಕೆ.ಆರ್.ಪುರಂ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೆಳತ್ತೂರು ಗ್ರಾಮದ ಸರ್ವೆ ನಂ.72/1 ಹಾಗೂ 72/2 ರಲ್ಲಿ ವಿವೇಕ್ ಕನ್‌ಟ್ರಕ್ಷನ್ ಎಂಬುವವರು ಬೃಹತ್ ಕಟ್ಟಡವನ್ನು ನಿರ್ಮಾಣಮಾಡಿಕೊಂಡಿರುತ್ತಾರೆ. ಹಾಗೇಯೇ ಎಲೆಮಲ್ಲಪ್ಪನಕೆರೆಯ ನೀರು ಕಾಲುವೆಯನ್ನು ರಸ್ತೆಯನ್ನಾಗಿ ಮಾಡಿಕೊಂಡಿರುತ್ತಾರೆ, ಹಾಗೇಯೇ ರಾಜಕಾಲುವೆಯನ್ನು ಒತ್ತುವರಿ ಮಾಡಿಕೊಂಡಿರುತ್ತಾರೆ.

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಕೆ.ಆರ್.ಪುರಂ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬೆಳತ್ತೂರು ಗ್ರಾಮದ ಸರ್ವೆ ನಂ.72/1 ಹಾಗೂ 72/2 ರಲ್ಲಿ ವಿವೇಕ್ ಕನ್‌ಟ್ರಕ್ಷನ್ ಎಂಬುವವರು ಬೃಹತ್ ಕಟ್ಟಡವನ್ನು ನಿರ್ಮಾಣಮಾಡಿಕೊಂಡಿರುತ್ತಾರೆ. ಹಾಗೇಯೇ ಎಲೆಮಲ್ಲಪ್ಪನಕೆರೆಯ ನೀರು ಕಾಲುವೆಯನ್ನು ರಸ್ತೆಯನ್ನಾಗಿ ಮಾಡಿಕೊಂಡಿರುತ್ತಾರೆ, ಹಾಗೇಯೇ ರಾಜಕಾಲುವೆಯನ್ನು ಒತ್ತುವರಿ ಮಾಡಿಕೊಂಡಿರುತ್ತಾರೆ. ರಾಜಕಾಲುವೆಯ ಮೇಲೆ ಕಾಂಗ್ರೇಟ್‌ನ್ನು ಹಾಕಿಕೊಂಡು ರಸ್ತೆಯನ್ನಾಗಿ ಮಾಡಿಕೊಂಡಿರುತ್ತಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಸಹಾಯಕ ಕಾರ್ಯಪಾಲಕ ಅಭಿಯಂತರರಿಗೂ ದೂರನ್ನು ಸಲ್ಲಿಸಿದ್ದು ಆದರು ಸಹಾ ಕಾಮಗಾರಿಯನ್ನು ನಿಲ್ಲಿಸದೆ ಬಹುಮಹಡಿ ಕಟ್ಟಡವನ್ನು ನಿರ್ಮಾಣಮಾಡಿಕೊಂಡಿರುತ್ತಾರೆ. ಆದ್ದರಿಂದ ತಾವುಗಳು ಸ್ಥಳವನ್ನು ಪರಿಶೀಲನೆ ಮಾಡಿ ಒತ್ತುವರಿಯಾಗಿರುವ ರಾಜಕಾಲುವೆಯನ್ನು ತೆರವುಗೊಳಿಸಬೇಕಾಗಿ ವಿನಂತಿಸಿಕೊಳ್ಳುತ್ತೇನೆ.

ವಂದನೆಗಳೊಂದಿಗೆ

ಇಂತಿ ತಮ್ಮ ವಿಶ್ವಾಸಿ

Susheela S

ಮಾನವ ಹಕ್ಕುಗಳ ಜಾಗೃತಿ ಸಮಿತಿ (ರಿ)
(ಸುಶೀಲ.ಎಸ್)

ಆದೇಶ ಸಂ. 1539 ಮತ್ತು 1540

ದಿನಾಂಕ :

... ಸಂಖ್ಯೆ : 45/2018 ದಿನಾಂಕ : 26/06/2018

... ಎಂ.ಎಸ್, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ, ಬೆಂಗಳೂ...

| ಜಿಲ್ಲೆ: ಬೆಂಗಳೂರು ನಗರ | ... ಮತ್ತು ಅಪರಾಧದ ಹೆಸರು ... ಸಿದ ಸಂದರ್ಭಗಳ ವಿವರಗಳು ... ಸೂನು ಪ್ರಕರಣದ ಮೇಲೆ ... ಗಾಗಿದೆ. | ಆಪಾದಿ... ಮತ್ತು ... ಹಾಗೂ ದೋಷಾ... | ಸಾಕ್ಷಿಗಳ ಹೆಸರುಗಳು ಮತ್ತು ವಿಳಾಸಗಳು | ... ಯಾವಂದ ಮತ್ತು ಯಾವಿಂದ ... ವಿವರಗಳೊಂದಿಗೆ ಸ್ವತ್ತಿನ (ದೊರೆತ ಆಯುಧಗಳೂ ಸೇರಿದಂತೆ) ವಿವರ ಮತ್ತು ಅದನ್ನು ಮ್ಯಾಜಿಸ್ಟ್ರೇಟರಿಗೆ ಕಳುಹಿಸಲಾಗಿದೆಯೋ? | ... ಮೇಲೆ ... ಮುಚ್ಚಳಿಕೆ ಪತ್ರದ ಮೇಲೆ | |
|---|---|---|---|---|---|---|
| | 7 | | 6 | 5 | 4 | 3 |
| ಠಾಣೆ: ಬಿ.ಎಂ.ಟಿ.ಎಫ್<br>ದೋಷಾರೋಪಣಾ ಪಟ್ಟಿ ಸಂ.<br>ಪ್ರ ವ ವ ಸಂಖ್ಯೆ<br>ಮೊ.ಸಂ.45/2018<br>ಕಲಂ 436(ಎ) ಕೆ.ಎಂ.ಸಿ.ಆಕ್ಟ್<br>ಮ್ಯಾಜಿಸ್ಟ್ರೇಟ್ ಪ್ರಕರಣ ಸಂಖ್ಯೆ<br>ಸರಕಾರದ ವಿರುದ್ಧಅಪಾದಿತ (ಹೆಸರು)<br>ಜಯಚಂದ್ರ ರೆಡ್ಡಿ<br>ಫಲಿತಾಂಶ<br>ಮ್ಯಾಜಿಸ್ಟ್ರೇಟರು | 436(ಎ) ಕೆ.ಎಂ.ಸಿ. ಆಕ್ಟ್<br>ಬೆಂ... ...ರ್ವ ತಾಲ್ಲೂಕು, ಕೆ.ಆರ್.ಪುರಂ, ಬಿದರಹಳ್ಳಿ ... ಬೆಳತ್ತೂರು ಗ್ರಾಮದ ಸರ್ವೇ ನಂ 72/1 & ... ರಾಜಕಾಲುವೆ ಒತ್ತುವರಿ ಆಗಿರುವ ಬಗ್ಗೆ ಸಾಕ್ಷಿ ... ನೀಡಿದ ದೂರಿನ ಅನ್ವಯ ಸಾಕ್ಷಿ-1 ರವರು ... ವಿಚಾರಣೆಯಲ್ಲಿ ಬೆಳತ್ತೂರು ಗ್ರಾಮದ ... 72/1 & 72/2 ರಲ್ಲಿ ಕಾಲಂ ನಂ 2 ರಲ್ಲಿ ... ಸಿರುವ ಆರೋಪಿಯು 0-04.5 ವಿಸ್ತೀರ್ಣದ ... ಯನ್ನು ಒತ್ತುವರಿ ಮಾಡಿ ರಸ್ತೆ ನಿರ್ಮಾಣ ... ದಾಗಿ ಸಾಕ್ಷಿ-6 ರವರ ವರದಿ ಮತ್ತು ... 4, 5 ರವರುಗಳ ಸ್ಥಳ ಪಂಚನಾಮೆ ... ದಾಖಲಾತಿಗಳಿಂದ ದೃಡಪಟ್ಟಿರುತ್ತದೆ.<br>ಆದ್ದರಿಂದ ಕಾಲಂ ನಂ 2 ರಲ್ಲಿ ನಮೂದಿಸಿರುವ ಆರೋಪಿ ಮೇಲ್ಕಂಡ ಕಲಂ ರೀತ್ಯಾ ಶಿಕ್ಷಾರ್ಹ ಅಪರಾಧವೆಸಗಿದ್ದು, ಆರೋಪಿಯ ವಿರುದ್ಧ ಮೇಲ್ಕಂಡ ಕಲಂ ರೀತ್ಯಾ ದೋಷಾರೋಪಣಾ ಪತ್ರವನ್ನು ಸಲ್ಲಿಸಲಾಗಿದೆ.<br>( ಕಲಂ 217 ಐಪಿಸಿ ಯನ್ನು ಸಾಕ್ಷ್ಯಾಧಾರಗಳ ಕೊರತೆಯಿಂದಾಗಿ ಕೈಬಿಡಲಾಗಿದೆ) | | ಶ್ರೀಯುತರುಗಳು<br>ಸಾಕ್ಷಿ-1 ರವಿ. ಎಂ.ಎಸ್. ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ<br>ಸಾಕ್ಷಿ-2 ಸುಶೀಲ.ಎಸ್, ಮಾನವ ಹಕ್ಕುಗಳ ಜಾಗೃತಿ ಸಮಿತಿ (ರಿ), ಗಾಂಧಿಪುರ 7ನೇ ಕ್ರಾಸ್, ವೈಟ್‌ಫೀಲ್ಡ್ ಅಂಚೆ ಬೆಂಗಳೂರು-66.<br>ಸಾಕ್ಷಿ-3 ಹೆಚ್.ಎನ್. ಜಯಸಿಂಹ ಸಹಾಯಕ ಕಾರ್ಯಪಾಲಕ ಅಭಿಯಂತರು ಬೃಹತ್ ಮಳೆನೀರುಗಾಲುವೆ ವಿಭಾಗ ಮಹದೇವಪುರ ವಲಯ ಬಿಬಿಎಂಪಿ, ಬೆಂಗಳೂರು.<br>ಸಾಕ್ಷಿ-4 ಕೆ.ಪ್ರಕಾಶ್, ನಂ 38, 9ನೇ ಕ್ರಾಸ್ ವಿಜಯ ಬ್ಯಾಂಕ್ ಕಾಲೋನಿ ಕೆ.ಆರ್.ಪುರಂ, ಬೆಂಗಳೂರು.<br>ಸಾಕ್ಷಿ-5 ಸಂತೋಷ್ ಕುಮಾರ್, ನಂ 57 ಚಾಮಣ್ಣ ರೆಡ್ಡಿ ಕಾಪೌಂಡ್, ಹಳೆ ಸರ್ಕಾರಿ ಶಾಲೆ ಪತ್ತಿರ, ಎ.ನಾರಾಯಣಪುರ, ಬೆಂಗಳೂರು.<br>(ಮುಂದುವರೆದಿದೆ) | 1. ಬಿ.ಎಂ.ಟಿ.ಎಫ್. ಪೊಲೀಸ್‌ಠಾಣಾ ಮೊ.ಸಂ. 45/2018 ಕಲಂ 436(ಎ) ಕೆ.ಎಂ.ಸಿ.ಆಕ್ಟ್ & 217 ಐಪಿಸಿ ಪ್ರಥಮ ವರ್ತಮಾನ ವರದಿ & ಪಿರ್ಯಾದು.<br>2. ಸುಶೀಲ.ಎಸ್, ಮಾನವ ಹಕ್ಕುಗಳ ಜಾಗೃತಿ ಸಮಿತಿ (ರಿ), ಗಾಂಧಿಪುರ, 7ನೇ ಕ್ರಾಸ್, ವೈಟ್‌ಫೀಲ್ಡ್ ಅಂಚೆ, ಬೆಂಗಳೂರು-66. ಮೊ.ನಂ. 7022964273, ರವರು ನೀಡಿರುವ ದೂರು ಅರ್ಜಿ ಅಸಲು<br>3. ಸ್ಥಳ ಪಂಚನಾಮೆ ದಿನಾಂಕ : 24-4-2019 ಅಸಲು<br>4. ಭೂದಾಖಲೆಗಳ ಸಹಾಯಕ ನಿರ್ದೇಶಕರು, ಬೆಂಗಳೂರು ಪೂರ್ವ ತಾಲ್ಲೂಕು ರವರ ಕಛೇರಿ ಪತ್ರ ನಂ: ಭೂ.ಸ.ನಿ(ಪೋ)ಇತರೆ/76/17-18 ದಿನಾಂಕ 6-6-2018 ರಲ್ಲಿ ನೀಡಿರುವ ಒತ್ತುವರಿ ವರದಿ ಮತ್ತು ಒತ್ತುವರಿ ನಕ್ಷೆ | | |

ರನ್ನ, ಕಲ್ಯಾಣ ನಗರ, ... 

(ಆರೋಪಿ ತನಿಖೆಗೆ ಸಹಕರಿಸಿರುವುದರಿಂದ ದಸ್ತಗಿರಿ ಮಾಡಿರುವುದಿಲ್ಲ)

Police Inspector
B.M.T.F. Police Station
Bengaluru

(2)

| ಕಾಲಂ ನಂ –06 ಮುಂದುವರೆದಿದೆ |
|---|
| ಸಾಕ್ಷಿ–6 ಮಂಜುನಾಥ ತವಾನೆ<br>ಸಹಾಯಕ ನಿರ್ದೇಶಕರು ಭೂದಾಖಲೆಗಳು.<br>ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ<br>ಬೆಂಗಳೂರು.<br><br>ಸಾಕ್ಷಿ–7 ಅಮರೇಶ ಗೌಡ.ಎ<br>ಪೋಲೀಸ್ ಸಬ್ ಇನ್ಸ್‌ಪೆಕ್ಟರ್<br>ಬಿ.ಎಂ.ಟಿ.ಎಫ್, ಬೆಂಗಳೂರು.<br><br>ಸಾಕ್ಷಿ–8 ಹೆಚ್.ಕೆ.ಮಹಾನಂದ<br>ಪೋಲೀಸ್ ಇನ್ಸ್‌ಪೆಕ್ಟರ್<br>ಬಿ.ಎಂ.ಟಿ.ಎಫ್, ಬೆಂಗಳೂರು.<br><br>ಸಾಕ್ಷಿ–9 ಪ್ರಕಾಶ ರಾಠೋಡ<br>ಪೋಲೀಸ್ ಇನ್ಸ್‌ಪೆಕ್ಟರ್<br>ಬಿ.ಎಂ.ಟಿ.ಎಫ್, ಬೆಂಗಳೂರು.<br>(ತನಿಖಾಧಿಕಾರಿಗಳು) |

28/10/19

Police Inspector
B.M.T.F. Police Station
Bengaluru

# FIRST INFORMATION REPORT

**(Under Section 154 Crpc)**

[ Before the Honorable 4th ACMM Court, Bengaluru City ]

1. Crime No: **46/2018** Police Station: Bengaluru Metropolitan Task Force

FIR Date: 10-07-2018 TIME: 15-30 hrs. District : Bengaluru City

Type : Computer Typed State : Karnataka

2. Act and Section: **192(A), 192(B) KLR Act, 436(A) KMC Act, 409 IPC, 420 IPC**

3. (a) Occurrence of offence: From: Prior to 26-04-2018

Time from: 00:00:00 Hrs. Day:

(b) Information received at P.S: Date: 10-07-2018

(c) Type of Information: Written (Computer typed)

4. Place of occurrence: **Bengaluru East Taluk Doddagubbi Village, Survey No. 74 to 81, 84, Bileshivale Village Survey No. 17, 18, 19 and Anagalapura Village Survey No. 38 to 46, 48**

(a) Direction and Distance from Police Station: 22 **Kms towards East**

(b) In Case outside limits of this police Station then Name of P.S: Dist.

5. Complainant/Informant.

(a) Name: **Sri. Deepak V.R** (b) Father Name:

(c) Age : (d) Nationality: **Indian**

(e) Passport No: (f) Date of Issue:

(g) Place of Issue: (h) Occupation: **Police Sub-Inspector**

Address: **B.M.T.F Police Station, N.R Square, BBMP Head Office, Bengaluru.**

6. Details of Known/ Suspected/Unknown Accused with Full Particulars:

1. **Sri. Channakeshava, Managing Director, Asha Township.**
2. **Concerned Officials.**

7. Reasons for Delay in reporting by the Complainant/Informant:

8. Particulars of Properties stolen/ involved:

9. Total Value of Properties Stolen/involved:

10. Inquest reports/U.D Case no if any:

11. Brief facts: **As attached**

(1) Detected (Name of I.O): Shivakumar.V Rank: Police Sub-Inspector
(2) Refused Investigation due to
(3) On Point of jurisdiction transferred to PS District:
(a) Read over to the complainant informant, admitted to be correctly recorded, and a copy given to the complainant/Informant free Cost.? Yes
(b) If the Police Officer does not proceed to the spot for investigation of if he declines to investigate/S 157 Cr.P.C provision (a) or (b) the reason there of should be mentioned.

12. Action Taken: **Investigation.**

13. Signature/Thumb impression of complainant.

14. Date and time of dispatch to the court : 10-07-2018 at 15-45 hrs.

15. Name of the PC/HC who carried the FIR to the Court:- Chandrashekar CPC

Signature of the I.O

Name of the I.O. (Shivakumar.V)
Police Sub-Inspector
Rank: Police Sub-Inspector
Police Station: BMTF

Copy To

1. Additional Director Genaral Of Police, Bengaluru.
2. Superintendent of Police BMTF, Bengaluru City.
3. Dysp, BMTF, Bengaluru City.
4. Complaint Copy/Officer Copy.

ನಂ.ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/147/2018

ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ,
ಬೆಂಗಳೂರು ನಗರ.
ದಿನಾಂಕ: 10-07-2018

ರವರಿಗೆ,

ಠಾಣಾಧಿಕಾರಿ
ಬಿ.ಎಂ.ಟಿ.ಎಫ್ ಪೊಲೀಸ್ ಠಾಣೆ,
ಬೆಂಗಳೂರು.

ಮಾನ್ಯರೆ,

| | |
|---|---|
| ವಿಷಯ: | ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಿಸಲು ವಿಚಾರಣ ವರದಿಯನ್ನು ಸಲ್ಲಿಸುತ್ತಿರುವ ಬಗ್ಗೆ. |
| ಉಲ್ಲೇಖ: | ನಂ.ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/147/2018 ದಿನಾಂಕ: 26-04-2018 |

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಶ್ರೀ. ನಾರಾಯಣಪ್ಪ ರವರು ನೀಡಿದ ದೂರು ಅರ್ಜಿಯನ್ನು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಬಿಎಂಟಿಎಫ್ ರವರ ಕಛೇರಿಯಲ್ಲಿ ಸ್ವೀಕರಿಸಿ ಉಲ್ಲೇಖದಂತೆ ದಾಖಲಾಗಿರುತ್ತದೆ.

ದೂರು ಅರ್ಜಿಯ ಸಾರಾಂಶವೇನೆಂದರೆ, 1) ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬಿಳೆಶಿವಾಲೆ ಗ್ರಾಮದ ಸರ್ವೇ ನಂಬರ್ 09 ಮತ್ತು 76 ಕ್ಕೆ ಸಂಬಂಧಿಸಿದಂತೆ ಟಿ.ಡಿ.ಆರ್ ಪ್ರಕ್ರಿಯೇಯಲ್ಲಿ ಅಕ್ರಮವಾಗಿ ಡಿ.ಆರ್.ಸಿ ಪಡೆದು ಬಿಬಿಎಂಪಿ ಬೊಕ್ಕಸಕ್ಕೆ ಬಾರಿ ನಷ್ಟ ಉಂಟು ಮಾಡಿರುವ ಬಗ್ಗೆ, 2) ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಬಿಳೆಶಿವಾಲೆ ಗ್ರಾಮ ಶ್ರೀ ಕಟ್ಟಣಗಿರಿ ಅಂಜಿನೇಯ ಸ್ವಾಮಿ ದೇವಸ್ಥಾನ ಹತ್ತಿರ ಬರುವ ರಾಜಕಾಲುವೆಯನ್ನು ಮಣ್ಣು ತುಂಬಿಸಿರುವ ಬಗ್ಗೆ ಹಾಗೂ 3) ಇದೇ ಗ್ರಾಮದ ಸರ್ವೇ ನಂಬರ್‌ಗಳಲ್ಲಿ ಬರುವ ರಾಜಕಾಲುವೆ ಮತ್ತು ಸರ್ಕಾರಿ ಬಿ ಜಾಗವನ್ನು ಒತ್ತುವರಿ ಮಾಡಿಕೊಂಡು ಅನಧಿಕೃತವಾಗಿ ಆಶಾ ಟೌನ್‌ಶಿಪ್ ಎಂಬ ಬಡಾವಣೆಯನ್ನು ಶ್ರೀ. ಚೆನ್ನಕೇಶವ ಎಂಬುವವರು ನಿರ್ಮಾಣ ಮಾಡಿ ಗ್ರಾಹಕರಿಗೆ ನಿವೇಶನಗಳನ್ನು ಮಾರಾಟ ಮಾಡಿ ಸರ್ಕಾರಕ್ಕೆ ಅಪಾರ ನಷ್ಟ ಉಂಟು ಮಾಡಿರುವ ಬಗ್ಗೆ ಹಾಗೂ ಇವರ ವಿರುದ್ಧ ಕಾನೂನು ರೀತಿಯ ಕ್ರಮ ಜರುಗಿಸುವಂತೆ ನೀಡಿದ ದೂರಾಗಿರುತ್ತದೆ.

ಉಲ್ಲೇಖದ ದೂರು ಅರ್ಜಿಯನ್ನು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು ರವರು ಮುಂದಿನ ಅಗತ್ಯ ಕ್ರಮ ಜರುಗಿಸುವಂತೆ ನನಗೆ ಸೂಚಿಸಿದ್ದ ಮೇರೆಗೆ ಈ ಕೆಳಕಂಡಂತೆ ವಿಚಾರಣೆಯನ್ನು ಕೈಗೊಂಡಿರುತ್ತೇನೆ.

ಬಿಳೆಶಿವಾಲೆ ಗ್ರಾಮದ ಸರ್ವೆ ನಂ. 09 ರ ಟಿಡಿಆರ್ ಪ್ರಕ್ರಿಯೇಗೆ ಸಂಬಂಧಿಸಿದ ಹಾಗೂ ಬಿಳೆಶಿವಾಲೆ ಗ್ರಾಮದ ಶ್ರೀ ಕಟ್ಟಣಗೆರಿ ಅಂಜಿನೆಯ ಸ್ವಾಮಿ ದೇವಸ್ಥಾನ ಹತ್ತಿರ ಬರುವ ರಾಜಕಾಲುವೆಯನ್ನು ಮಣ್ಣು ತುಂಬಿಸಿರುವ ವಿಷಯಕ್ಕೆ ಸಂಬಂಧಿಸಿದ ವಿಚಾರಣೆಯಲ್ಲಿ, ದೂರು ಅರ್ಜಿಯಲ್ಲಿ ಆರೋಪಿಸಿರುವಂತೆ ಸಾಕ್ಷಿ ಆಧಾರಗಳು ಲಭ್ಯವಾಗದ ಕಾರಣ, ಸದರಿ ದೂರು ಅರ್ಜಿಯ ಈ ಎರಡು ವಿಷಯಗಳ ವಿಚಾರಣೆಯನ್ನು ಮುಕ್ತಾಯ ಮಾಡಲಾಗಿರುತ್ತದೆ.

ಮುಂದುವರಿದಂತೆ, ಆಶಾ ಟೌನ್‌ಶಿಪ್ ಬಡಾವಣೆಯಲ್ಲಿ ಸರ್ಕಾರಿ ಬಿ ಖರಾಬ್ ಒತ್ತುವರಿಗೆ ಸಂಬಂಧಿಸಿದ ವಿಚಾರಣೆಯಿಂದ, ಉಪ ತಹಸಿಲ್ದಾರ್, ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು ರವರು ತಮ್ಮ ಕಛೇರಿ ಪತ್ರ ಬಿ.ಸಾಕ:ಪಿ.ಆರ್/LX/D:CR:60/18-19 ರಂತೆ ವರದಿಯನ್ನು ನೀಡಿದ್ದು, ವರದಿಯಲ್ಲಿ; ಆಶಾ ಟೌನ್‌ಶಿಪ್ ಎಂಬ ಬಡಾವಣೆಯು ದೊಡ್ಡಗುಬ್ಬಿ ಗ್ರಾಮದ ಸರ್ವೇ ನಂ. 74, 75, 76, 77, 78, 79, 80, 81, 84, ಬಿಳಿಶಿವಾಲೆ ಗ್ರಾಮದ ಸರ್ವೇ ನಂ. 17, 18, 19 ಹಾಗೂ ಅಣಗಲಪುರ ಗ್ರಾಮದ ಸರ್ವೇ ನಂ. 38, 39, 40, 41, 42, 43, 44, 45, 46, 48 ಸ.ನಂ ಗಳಲ್ಲಿ, ಬಿಳಿಶಿವಾಲೆ ಗ್ರಾಮದ ನಿವಾಸಿಯಾದ ಬಿ.ಎಂ. ಚನ್ನಕೇಶವ ಬಿನ್ ಲೇಟ್ ಬಿ.ಸಿ ಮುದ್ದಣ್ಣ ಎಂಬುವವರು ಆಶಾ ಟೌನ್‌ಶಿಪ್ ಎಂಬ ಬಡಾವಣೆ ನಿರ್ಮಾಣ ಮಾಡಿದ್ದು, ಸದರಿ ದೊಡ್ಡಗುಬ್ಬಿ, ಬಿಳಿಶಿವಾಲೆ, ಅಣಗಲಪುರ ಗ್ರಾಮಗಳ ಮೇಲೆ ತಿಳಿಸಿದ ಸ.ನಂ. ಗಳಲ್ಲಿ ರಾಜಕಾಲುವೆ ಮತ್ತು ಸರ್ಕಾರಿ "ಬಿ" ಖರಾಬ್ ಜಮೀನಿದ್ದು, ಸದರಿ ಸ.ನಂ. ಗಳ ಗಡಿ ಗುರುತುಗಳನ್ನು ಹಾಳು ಮಾಡಿರುವುದು ಹಾಗೂ ರಾಜಕಾಲುವೆಯನ್ನು ಒತ್ತುವರಿ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ ಎಂಬ ಅಂಶದ ಬಗ್ಗೆ ದೃಡಪಡಿಸಿರುತ್ತಾರೆ.

ಶ್ರೀ. ಚೆನ್ನಕೇಶವ, ಮ್ಯಾನೆಜಿಂಗ್ ಡೈರೆಕ್ಟರ್, ಆಶಾ ಟೌಂನ್‌ಶಿಪ್ ಬಡಾವಣೆ ರವರಿಗೆ ಸದರಿ ದೂರು ಅರ್ಜಿಯ ಈ ವಿಷಯದ ವಿಚಾರಣೆಗೆ ಹಾಜರಾಗುವಂತೆ ಮೂರು ಬಾರಿ ಪೊಲೀಸ್ ನೋಟಿಸ್ ಜಾರಿ ಮಾಡಿದ್ದರು ಕೂಡ ವಿಚಾರಣೆಗೆ ಹಾಜರಾಗದೆ ಸಹಕರಿಸಿರುವುದಿಲ್ಲ. ಹಾಗೂ ಇವರು ಒತ್ತುವರಿ ಮಾಡಿರುವ ಸರ್ಕಾರಿ ಜಾಗದಲ್ಲಿ ನಿವೇಶನಗಳನ್ನು ರಚಿಸಿ ಗ್ರಾಹಕರಿಗೆ ಮಾರಾಟ ಮಾಡಿ ಮೋಸವನ್ನು ಮಾಡಿರುವುದು ಕೂಡ ತಿಳಿದು ಬಂದಿರುತ್ತದೆ.

ಆದ್ದರಿಂದ, ಸದರಿ ದೊಡ್ಡಗುಬ್ಬಿ, ಬಿಳಿಶಿವಾಲೆ, ಅಣಗಲಪುರ ಗ್ರಾಮಗಳ ಗಡಿ ಗುರುತುಗಳನ್ನು ಹಾಳು ಮಾಡಿ ರಾಜಕಾಲುವೆಯನ್ನು ಒತ್ತುವರಿ ಮಾಡಿರುವ ವಿಷಯದ ಬಗ್ಗೆ ಕುಲಂಕುಷವಾಗಿ ತನಿಖೆ ನಡೆಸ ಬೇಕಾಗಿರುವುದರಿಂದ, 1) ಶ್ರೀ. ಚೆನ್ನಕೇಶವ, ಮ್ಯಾನೆಜಿಂಗ್ ಡೈರೆಕ್ಟರ್, ಆಶಾ ಟೌಂನ್‌ಶಿಪ್, ಮತ್ತು 2) ಸರ್ಕಾರಿ ಬಿ ಖರಾಬ್ ಜಾಗದ ಒತ್ತುವರಿಯನ್ನು ತಡೆಗಟ್ಟುವಲ್ಲಿ ಹಾಗೂ ತೆರವುಗೊಳಿಸುವಲ್ಲಿ ವಿಫಲರಾಗಿರುವ ಸಂಬಂಧಪಟ್ಟ ಎಲ್ಲಾ ಕಂದಾಯ ಅಧಿಕಾರಿಗಳ ವಿರುದ್ಧ ಪ್ರಕರಣ ದಾಖಲಿಸಿ ತನಿಖೆ ನಡೆಸಲು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಬಿಎಂಟಿಎಫ್, ರವರು ಸದರಿ ದೂರು ಅರ್ಜಿಯ ಕಡತದ ಟಿಪ್ಪಣಿ ಕಂಡಿಕೆ (11) ರಂತೆ ಅನುಮತಿಯನ್ನು ನೀಡಿರುತ್ತಾರೆ.

ಆದ್ದರಿಂದ, 1) ಶ್ರೀ. ಚೆನ್ನಕೇಶವ ಹಾಗೂ ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸಲು ನಿವೇದಿಸಿಕೊಂಡಿರುತ್ತೇನೆ.

ತಮ್ಮ ವಿಶ್ವಾಸಿ,

[signature] 10/07/18

(ದೀಪಕ್ ವಿ.ಆರ್)

ಪಿ.ಎಸ್.ಐ.

15:30 ಗಂಟೆ

ದಿ-10-7-2018 ರಂದು ಮಾನ್ಯ ADGP ರವರ [illegible]

[illegible]

[illegible]

[illegible] 46/2018 u/s 192(A) 198(B)

KLR act, 436(A) KMC act ಮತ್ತು

[illegible] 409, 420 [illegible]

# FIRST INFORMATION REPORT

**(Under Section 154 Crpc)**

[ Before the Honorable 4th ACMM Court, Bengaluru City ]

1. Crime No: **48/2018** Police Station: Bengaluru Metropolitan Task Force

   FIR Date: 11-07-2018 TIME: 17-00 hrs. District : Bengaluru City

   Type : Computer Typed State : Karnataka

2. Act and Section: **33, 72 BDA Act and 409, 420 IPC**

3. (a) Occurrence of offence: From: Prior to 28-12-2017

   Time from: 00:00:00 Hrs. Day:

   (b) Information received at P.S: Date: 11-07-2018

   (c) Type of Information: Written (Computer typed)

4. Place of occurrence: **Bengaluru, Kempapura Agrahara Village Survey No. 359/1, 2(P), 374/1, 375/1, 2, 371/1, 2, 3, 377 to 6**

   (a) Direction and Distance from Police Station: 10 **Kms towards West**

   (b) In Case outside limits of this police Station then Name of P.S: Dist.

5. Complainant/Informant.

   (a) Name: **Sri. Ravi M.S** (b) Father Name:

   (c) Age : (d) Nationality: **Indian**

   (e) Passport No: (f) Date of Issue:

   (g) Place of Issue: (h) Occupation: **Police Sub-Inspector**

   Address: **B.M.T.F Police Station, N.R Square, BBMP, Bengaluru.**

6. Details of Known/ Suspected/Unknown Accused with Full Particulars:

1. **Sri.Anantha Padmanabha, President and other office bearers of Vyalikaval Housing Building Co- operative Society.**
2. **Concernd B.D.A Officials.**
3. **Concerned Mediators/Agents**

7. Reasons for Delay in reporting by the Complainant/Informant:

8. Particulars of Properties stolen/ involved:

9. Total Value of Properties Stolen/involved:

10. Inquest reports/U.D Case no if any:

11. Brief facts: **As attached**

(1) Detected (Name of I.O): Shivakumar.V Rank: Police Sub-Inspector
(2) Refused Investigation due to
(3) On Point of jurisdiction transferred to PS District:
(a) Read over to the complainant informant, admitted to be correctly recorded, and a copy given to the complainant/Informant free Cost.? Yes
(b) If the Police Officer does not proceed to the spot for investigation of if he declines to investigate/S 157 Cr.P.C provision (a) or (b) the reason there of should be mentioned.

12. Action Taken: **Investigation.**

13. Signature/Thumb impression of complainant.

14. Date and time of dispatch to the court : 11-07-2018 at 17-15 hrs.

15. Name of the PC/HC who carried the FIR to the Court:- Chandrashekar CPC

Signature of the I.O

Name of the I.O : (Shivakumar.V)
Rank: Police Sub-Inspector
Police Station: BMTF

B.M.T.F. Police Station
Bengaluru.

Copy To

1. Additional Director Genaral Of Police, Bengaluru.
2. Superintendent of Police BMTF, Bengaluru City.
3. Dysp, BMTF, Bengaluru City.
4. Complaint Copy/Officer Copy.

# ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ



ನಂ.ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/222/2017

ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ,
ಪೊಲೀಸ್ ಠಾಣೆ, ಬೆಂಗಳೂರು ನಗರ.

ರವರಿಗೆ,

ಠಾಣಾಧಿಕಾರಿಗಳು,
ಬೆಂಗಳೂರು ಮಹಾನಗರ ಕಾರ್ಯಚರಣೆ ಪಡೆ,
ಬೆಂಗಳೂರು.

ಮಾನ್ಯರೇ,

**ವಿಷಯ:** ದೂರು ಅರ್ಜಿಯ ವಿಚಾರಣಾ ವರದಿಯ ಮೇರೆಗೆ ಪ್ರಕರಣ ದಾಖಲಿಸುವ ಬಗ್ಗೆ
**ಉಲ್ಲೇಖ:** ನಂ. ಎಡಿಜಿಪಿ/ಬಿಎಂ.ಟಿ.ಎಫ್/ಪೆಟಿಷನ್/222/2017, ದಿನಾಂಕ:28-12-2017

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ವ್ಯೆಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸ್ಯೆಟಿ ರವರು ಕೆಂಪಾಪುರ ಅಗ್ರಹಾರ ಗ್ರಾಮದ ಸರ್ವೆ ನಂ.359/1, 2(ಪಿ), 374/1, 375/1, 2, 371/1, 2, 3, 377 ರಿಂದ 6 ಗಳಲ್ಲಿ ನಿರ್ಮಿಸಿದ ಮೇಲ್ಕಂಡ ಬಡಾವಣೆಯಲ್ಲಿ ನಾಗರೀಕ ಸೌಲಭ್ಯಕ್ಕೆ ಮೀಸಲಿಡಲಾಗಿದ್ದ ಸಿ.ಎ.ನಿವೇಶನಗಳನ್ನು ಒತ್ತುವರಿ ಮಾಡಿಕೊಂಡು ಅನಧಿಕೃತವಾಗಿ ಕಟ್ಟಡ ನಿರ್ಮಿಸುತ್ತಿರುವುದಾಗಿ ಹಾಗೂ ಸದರಿ ಬಡಾವಣೆಯ ಸಿಎ ನಿವೇಶನಗಳನ್ನು ಉದ್ದೇಶಪೂರ್ವಕವಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸದೇ ಅಕ್ರಮವೆಸಗುತ್ತಿರುವ ಬಗ್ಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ನಂ.2 ಪಶ್ಚಿಮ ಉಪವಿಭಾಗ, ಬಿಡಿಎ ರವರು ನೀಡಿದ ದೂರು ಅರ್ಜಿ ಉಲ್ಲೇಖದಂತೆ ಬಿಎಂಟಿಎಫ್ ಪೊಲೀಸ್ ಠಾಣೆಯಲ್ಲಿ ದಾಖಲಾಗಿದ್ದು, ವಿಚಾರಣೆಗಾಗಿ ನೀಡಲಾಗಿದ್ದ ಮೇರೆಗೆ ಈ ಕೆಳಕಂಡಂತೆ ವಿಚಾರಣೆ ಕೈಗೊಳ್ಳಲಾಗಿರುತ್ತದೆ.

ದಿನಾಂಕ:01.02.2018 ಮತ್ತು 06.02.2018 ರಂದು ಅನಂತ ಪದ್ಮನಾಭ, ಅಧ್ಯಕ್ಷರು, ವ್ಯೆಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸ್ಯೆಟಿ ಲಿಮಿಟೆಡ್, ಮಲ್ಲೇಶ್ವರಂ, ಬೆಂಗಳೂರು ರವರಿಗೆ ಬಡಾವಣೆಯ ಅನುಮೋದಿತ ನಕಾಶೆ ಮತ್ತು ಸಂಪೂರ್ಣ ದಾಖಲಾತಿಗಳೊಂದಿಗೆ ವಿಚಾರಣೆಗೆ ಹಾಜರಾಗುವಂತೆ ಪೊಲೀಸ್ ನೋಟಿಸ್ ಜಾರಿ ಮಾಡಿರುತ್ತೇನೆ.

ದಿನಾಂಕ:06.02.2018 ರಂದು ಸದರಿಯವರು ಠಾಣೆಗೆ ಹಾಜರಾಗಿ ದಾಖಲಾತಿಗಳನ್ನು ಹಾಜರು ಪಡಿಸಿದ್ದು, ಸದರಿ ದಾಖಲಾತಿಗಳನ್ನು ಪರಿಶೀಲಿಸಲಾಗಿ ವ್ಯೆಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸ್ಯೆಟಿ ಲಿಮಿಟೆಡ್ ರವರು 1992ನೇ ಸಾಲಿನಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಕೆಂಪಾಪುರ ಅಗ್ರಹಾರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ 20 ಎಕರೆ ಜಾಗವನ್ನು ಪಡೆದು, 2001ನೇ ಸಾಲಿನಲ್ಲಿ ಸದರಿ ಬಿಡಿಎ ಯಿಂದ ಆದೇಶ ಸಂಖ್ಯೆ:617/2001-02 ದಿನಾಂಕ:18.06.2001 ರಂದು ಬಡಾವಣೆ ಯೋಜನೆ ಮಂಜೂರು ಮಾಡಿಸಿಕೊಂಡು ಬಡಾವಣೆ ನಿರ್ಮಾಣ ಮಾಡಿರುವುದು ಕಂಡು ಬಂದಿರುತ್ತದೆ. ಹಾಗೂ ನಿವೇಶನಗಳನ್ನು ಸಂಘದ ಸದಸ್ಯರಿಗೆ ನೋಂದಾಣಿ ಮಾಡಿಕೊಡಲಾಗಿರುತ್ತದೆ. ಹಾಗೂ ದಿನಾಂಕ:19.04.2008 ಮತ್ತು ದಿನಾಂಕ:13.11.2017 ರಂದು ಸದರಿ ವ್ಯೆಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸ್ಯೆಟಿ ರವರಿಂದ ಮಾರ್ಪಾಡಿತ ಬಡಾವಣೆ ನಕ್ಷೆಯನ್ನು ಅನುಮೋದಿಸಲು ಕೋರಿ ಬಿಡಿಎಗೆ ಪತ್ರ ಬರೆದಿರುವುದು ಕಂಡು ಬಂದಿರುತ್ತದೆ.

ಸದರಿ ವ್ಯೆಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸ್ಯೆಟಿ ಲಿಮಿಟೆಡ್ ರವರಿಗೆ ಬಿಡಿಎ ಯಿಂದ ನೀಡಲಾದ ಆದೇಶ ಸಂಖ್ಯೆ:617/01-02 ರ ಆದೇಶದಲ್ಲಿ ವಸತಿ ಉದ್ದೇಶಕ್ಕಾಗಿ ಶೇ.55 ರಷ್ಟು ಜಾಗವನ್ನು ಬಳಸಿಕೊಳ್ಳಲು ಅನುಮತಿ ಇದ್ದು, ಸದರಿಯವರು ಹೆಚ್ಚುವರಿಯಾಗಿ ಶೇ.4

ರಷ್ಟು ಅಂದರೇ ಒಟ್ಟಾರೆ ಶೇ.59 ರಷ್ಟು ಪ್ರದೇಶವನ್ನು ವಸತಿ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿರುವುದಾಗಿ ಮತ್ತು ಸದರಿ ವಿಚಾರವನ್ನು ಬಿಡಿಎ ರವರಿಗೆ ತಿಳಿಸಿರುವುದಾಗಿ ಹೇಳಿರುತ್ತಾರೆ. ಮುಂದುವರೆದು, ಈ ವಿಚಾರವಾಗಿ ಬಿಡಿಎಗೆ ಪರಿಷ್ಕೃತ ಬಡಾವಣೆ ನಕ್ಷೆ ಮಂಜೂರಾತಿ ಕೋರಿ ದಿನಾಂಕ:25.09.2004, 19.04.2008 ಮತ್ತು 13.11.2017 ರಂದು ಮನವಿ ಸಲ್ಲಿಸಿರುವುದು ಹಾಗೂ ಈ ವಿಚಾರದಲ್ಲಿ ಬಿಡಿಎ ಗೆ ನಿರ್ದೇಶನ ನೀಡಲು ಕೋರಿ ಸರ್ಕಾರಕ್ಕೂ ಮನವಿ ಸಲ್ಲಿಸಿದ್ದು, ಸರ್ಕಾರದ ಪ್ರಧಾನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ರವರು ತಮ್ಮ ಕಛೇರಿ ಪತ್ರ ಸಂಖ್ಯೆ:ನಇ/293/ಬೆಂಆಸೇ/2005 ದಿನಾಂಕ:17.04.2007 ರಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರಿಗೆ ಪತ್ರ ಬರೆದಿರುವುದು ಕಂಡು ಬಂದಿರುತ್ತದೆ. ಪ್ರಸ್ತುತ ಈವರೆವಿಗೂ ಸದರಿ ಮಾರ್ಪಾಡಿತ ನಕ್ಷೆಯು ಬಿಡಿಎ ಯಿಂದ ಅನುಮೋದನೆ ಆಗಿರುವುದಿಲ್ಲ. ಹಾಗೂ ಈವರೆಗೂ ವೈಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್ ರವರು ಸಿಎ ಜಾಗಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಿರುವುದಿಲ್ಲ.

ದಿನಾಂಕ: 12-02-2018 ರಂದು ಸ್ಥಳಕ್ಕೆ ಭೇಟಿ ನೀಡಿ ಪರಿಶೀಲನೆ ನಡೆಸಿದ್ದು, ಆ ವೇಳೆಯಲ್ಲಿ ಸದರಿ ವೈಯಾಲಿಕಾವಲ್ ಬಡಾವಣೆಯಲ್ಲಿ ಬಿಡಿಎ ಅನುಮೋದಿತ ನಕ್ಷೆಯಲ್ಲಿ ಸಿ.ಎ ಮತ್ತು ಪಾರ್ಕ್ ಉದ್ದೇಶಗಳಿಗಾಗಿ ಮೀಸಲಿಡಲಾಗಿದ್ದ ಜಾಗಗಳಲ್ಲಿ ಶೆಡ್‌ಗಳು ಮತ್ತು ಕಾಂಪೌಂಡ್ ಹಾಗೂ ಮನೆಗಳು ನಿರ್ಮಾಣವಾಗಿರುವುದು ಮತ್ತು ಕೆಲವು ನಿರ್ಮಾಣ ಹಂತದಲ್ಲಿರುವುದು ಕಂಡುಬಂದಿರುತ್ತದೆ.

ದಿನಾಂಕ:14.06.2018 ರಂದು ಕಾರ್ಯಪಾಲಕ ಅಭಿಯಂತರರು, ಪಶ್ಚಿಮ ವಿಭಾಗ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ವಿಜಯನಗರ, ಬೆಂಗಳೂರು ಮತ್ತು ನಗರ ಯೋಜಕ ಸದಸ್ಯರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರಿಗೆ ತಮ್ಮ ಕಛೇರಿಯಿಂದ ಮಂಜೂರು ಮಾಡಿರುವ ಬಡಾವಣೆ ನಕ್ಷೆಯ ಧೃಢೀಕೃತ ಪ್ರತಿ ಮತ್ತು ಪ್ರಥಮ ಕಂತಿನ ನಿವೇಶನ ಬಿಡುಗಡೆ ಪತ್ರದ ಪ್ರತಿಗಳನ್ನು ಒದಗಿಸಲು ನೋಟೀಸ್ ಜಾರಿ ಮಾಡಿರುತ್ತೇನೆ.

ದಿನಾಂಕ:10.07.2018 ರಂದು ಕಾರ್ಯಪಾಲಕ ಅಭಿಯಂತರರು, ಪಶ್ಚಿಮ ವಿಭಾಗ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ವಿಜಯನಗರ, ಬೆಂಗಳೂರು ರವರು ದಿನಾಂಕ:14.06.2018 ರಂದು ನೀಡಲಾಗಿದ್ದ ನೋಟೀಸ್‌ಗೆ ಸಂಬಂಧಪಟ್ಟಂತೆ ವರದಿ ನೀಡಿದ್ದು, ಸದರಿ ವರದಿಯಲ್ಲಿ ಕೆಂಪಾಪುರ ಅಗ್ರಹಾರ ಗ್ರಾಮದ ಸರ್ವೆ ನಂ.359/1, 2(ಪಿ), 374/1, 375/1, 2, 371/1, 2, 3, 377 ರಿಂದ 6 ಗಳಲ್ಲಿ ಬಡಾವಣೆ ರಚಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಠರಾವು ಸಂಖ್ಯೆ:123/97 ದಿನಾಂಕ:19.05.1997 ರಂತೆ ಬಡಾವಣೆ ನಕ್ಷೆ ಅನುಮೋದನೆಯಾಗಿದ್ದು, ದಿನಾಂಕ:18.06.2001 ರಂತೆ ವೈಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್ ರವರಿಗೆ ಕಾರ್ಯಾದೇಶವನ್ನು ನೀಡಲಾಗಿದ್ದು, ಕಾರ್ಯಾದೇಶದಲ್ಲಿನ ನಿಬಂಧನೆ 7 ರಂತೆ ಬಡಾವಣೆಯಲ್ಲಿರುವ ರಸ್ತೆಗಳು ಹಾಗೂ ಉದ್ಯಾನವನ ಮತ್ತು ಖಾಲಿ ಜಾಗಗಳನ್ನು ಅನುಮೋದಿತ ನಕ್ಷೆ ಪ್ರಕಾರ ನಿವೇಶನಗಳನ್ನು ಬಿಡುಗಡೆ ಮಾಡುವ ಮೊದಲು ಅರ್ಜಿದಾರರ ವೆಚ್ಚದಲ್ಲಿ ನೋಂದಾಯಿತ ಪತ್ರದ ಮೂಲಕ ಮುಕ್ತಯೆಯಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡತಕ್ಕದ್ದು, ಎಂದು ನಿಬಂಧನೆ ವಿಧಿಸಲಾಗಿತ್ತು. ಆದರೆ ಸದರಿ ಸಹಕಾರ ಸಂಘದವರು ಬಡಾವಣೆಯಲ್ಲಿನ ರಸ್ತೆ, ಪೌರ ಸೌಲಭ್ಯ ನಿವೇಶನ ಮತ್ತು ಉದ್ಯಾನವನ ಜಾಗವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಹಸ್ತಾಂತರಿಸಿ ನಿವೇಶನಗಳನ್ನು ಪ್ರಾಧಿಕಾರದಿಂದ ಬಿಡುಗಡೆ ಮಾಡಿಸಿಕೊಳ್ಳದೇ ಸಂಘದ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡಿರುತ್ತಾರೆ. ಹಾಗೂ ಪ್ರಾಧಿಕಾರದಿಂದ ಅನುಮೋದನೆಗೊಂಡಿರುವ ನಕ್ಷೆಯಂತೆ ಸಿಎ ನಿವೇಶನದಲ್ಲಿ ಅಕ್ರಮವಾಗಿ 3 ಎಸಿ ಶೀಟ್ ಶೆಡ್ ಹಾಗೂ ಅನಧಿಕೃತ ಕಾಂಪೌಂಡ್ ಮುಂತಾದ ಅನಧಿಕೃತ ಕಟ್ಟಡಗಳು ನಿರ್ಮಾಣಗೊಂಡಿರುತ್ತವೆ. ಮತ್ತು ಪ್ರಾಧಿಕಾರದಿಂದ ಒಟ್ಟಾರೆ ಸದರಿ ಬಡಾವಣೆಯಲ್ಲಿ 90 ನಿವೇಶನಗಳನ್ನು ವೈಯಾಲಿಕಾವಲ್ ಹೌಸಿಂಗ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿಮಿಟೆಡ್ ರವರ ಪರವಾಗಿ ಬಿಡುಗಡೆ ಮಾಡಲಾಗಿರುತ್ತದೆಂದು

